# ಕೊಡಗು  ಸಂಗಾತಿ

ಸಂಪಾದಕಿ : ಪಟ್ಟೆಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

K.R.N.N. 240 ಸಂಪುಟ : 2 ಸಂಚಿಕೆ : 21 ನವೆಂಬರ್ 1 ರಿಂದ 15-1998 ಪುಟಗಳು : 24 ರೂ. 5

(ಲೇಖನ : ಒಳಪುಟಗಳಲ್ಲಿ)

ದಾನವೊಂದೇ ಕೀರ್ತಿಯ ಸಾಧನ, ಸತ್ಯವೊಂದೇ ಸ್ವರ್ಗದ ಬಾಗಿಲು ಎಂದು ತಿಳಿದ ಸಮಾಜ ಸುಧಾರಕ ಆದರ್ಶ ತ್ಯಾಗಮಯಿ ಸಂಪಾಜೆಯ ಶ್ರೀ ಸಣ್ಣಯ್ಯ ಪಟೇಲರು.

## ಶುಭಾಶಯ



**ಶ್ರೀ ಕೊರಿಯಾರು ಅಪ್ಪಣ್ಣ ರವಿಕುಮಾರ್ (ಸತ್ಯ)**

ಅರೆಭಾಷೆ ಗೌಡರ ಹೆಮ್ಮೆಯ ಪುತ್ರನಾಗಿ ನಿಮ್ಮ ಈ ವಿಶಿಷ್ಟ ಸಾದನೆಗೆ ಸಿಕ್ಕಿದ "ಭಾರತ್ ಶ್ರೀ" ಮತ್ತೆ "ಭಾರತ್ ಗೌರವ್" ಪುರಸ್ಕಾರಕ್ಕೆ ನಮಿಗೆ ಹೆಮ್ಮೆ. ಮುಂದೆ ನೀವು ಮಾಡ್‌ವ ಘನ ಕಾರ್ಯಕ್ಕೆ ನಮ್ಮೆಲ್ಲರ ಶುಭ ಹಾರೈಕೆ ಉಟ್ಟು.

**ಪಾಂಬಾರನ ಶಾಂತಪ್ಪ ಸೋಮಶೇಖರ್**
ಮತ್ತು ಮನೆಯವರು
ಕಂಬಿಬಾಣೆ, ಶುಂಠಿಕೊಪ್ಪ, ಕೊಡಗು.

## ಚಂದದಾರರಲ್ಲಿ ವಿನಂತಿ

"ಕೆಲವು ತಿಂಗಳುಗಳಿಂದ ಜ್ಞಾಪನಾ ಪತ್ರ ಕಳುಹಿಸಿದರೂ ಸಹ "ಕೊಡಗು ಸಂಗಾತಿಯು" ಚಂದ ನವೀಕರಿಸದೇ ಇರುವವರು ಆದಷ್ಟು ಬೇಗ ಚಂದಾ ಹಣ ಕಳಿಸಿಕೊಡುವಂತೆ ಕೋರಿಕೆ. ನೀವು ಕಳಿಸಬೇಕಾದ ಚಂದಾಹಣವು ಮನಿ ಆರ್ಡರ್‌ನ ಮುಖಾಂತರ ಅಥವಾ ಡಿ. ಡಿ. ಮುಖಾಂತರವಾಗಿರಲಿ. ಸ್ಥಳೀಯ ಚೆಕ್‌ಗಳನ್ನು ಮಾತ್ರ ಸ್ವೀಕರಿಸಲಾಗುವುದು ದಯವಿಟ್ಟು ಚಂದದಾರರು ಸಹಕರಿಸಬೇಕಾಗಿ ವಿನಂತಿ."

—ಸಂಪಾದಕಿ

# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**
ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ**
ಮುದ್ರಕರು :
**ಮಣ್ಣಂಡ್ರ ಕೆ. ತಮ್ಮಯ್ಯ**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :
**ಕೊಡಗು ಸಂಗಾತಿ**
ನಂ. 35, "ಸವಿತಾ ನಿಲಯ"
1ನೇ ಕ್ರಾಸ್, 4ನೇ ಬ್ಲಾಕ್,
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ,
ಜಯಲಕ್ಷ್ಮಿಪುರಂ, ಮೈಸೂರು-12.
ಫೋನ್ : 0821/516771

**-ಸಂಪರ್ಕಿಸುವ ವಿಳಾಸ-**

**ಮಣಿ ನಂಗಾರ್**
C/o ನಂಗಾರ್ ಆಡಿಯೋ & ವೀಡಿಯೊ
ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ-571 201
ದೂರವಾಣಿ : 08272/29372

**ಬೈತಡ್ಕ ಜಾನಕಿ ಬೆಳ್ಯಪ್ಪ**
ನಂ. 16, ಎಲ್.ಐ.ಸಿ. ಹತ್ತಿರ
ರೇಸ್ ಕೋರ್ಸ್ ರಸ್ತೆ, ಮಡಿಕೇರಿ
ದೂರವಾಣಿ : 08272/28047

**ಕುಂಭಗೌಡನ ಸೋಮಣ್ಣ**
ಮಯೂರ ಕೋಲ್ಡ್ ಸ್ಟೋರೇಜ್
ಮುಖ್ಯ ರಸ್ತೆ, ಕುಶಾಲನಗರ-571237

**ಅಮ್ಮಾಜೀರ ಪೊನ್ನಪ್ಪ ಅಥವಾ**
**ಕಲ್ಲುಮುಟ್ಲು ಬಸಪ್ಪ**
20, 1ನೇ ಮೈನ್, 4ನೇ ಕ್ರಾಸ್
ಸಾಕಮ್ಮ ಗಾರ್ಡನ್, ಬಸವನಗುಡಿ,
ಬೆಂಗಳೂರು-04
ದೂರವಾಣಿ-080/642822


## ಒಳನೋಟ

ಪುಟಗಳು



## ಅರೆ ಭಾಷಿಕ ವಿಭಾಗ



**ಚಂದಾ ವಿವರ**

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

# ಸಂಪಾದಕೀಯ :

## ಸರಳ ಜೀವನ

ನಮ್ಮ ಪೂರ್ವಿಕರು ಅದರಲ್ಲೂ ಋಷಿಗಳು ತಮ್ಮ ಜೀವಿತವನ್ನು ಸರಳವಾಗಿ ಸಾಗಿಸಿದ್ದರೂ ಅವರ ಚಿಂತನ ಮತ್ತು ಸಾಧನೆಗಳು ಉಚ್ಚ ರೀತಿಯಲ್ಲಿದ್ದವು. ಆದ್ದರಿಂದ ಅವರ ಜೀವನ ಮೌಲ್ಯ ಬಹಳ ಘನವಾಗಿದ್ದವು. "Low living and high thinking" ಎಂಬುದು ಆಗಿನ ಕಾಲ ಧರ್ಮವಾಗಿತ್ತು. ಈಗ ಅದು ತದ್ವಿರುದ್ಧವಾಗಿದೆ. "High living no thinking" ಆಗಿದೆ.

ಇದಕ್ಕೆ ಕಾರಣ ಈಗ ನಾವು ಜೀವನದ ಮೌಲ್ಯಗಳಿಗೆ ಇತಿಶ್ರೀ ಹಾಡಿ, ಆಸ್ತಿ, ಅಂತಸ್ತು, ಹಣ, ಅಧಿಕಾರಕ್ಕಾಗಿ ತಮ್ಮನ್ನೇ ಮಾರಿಕೊಂಡು ಅವುಗಳ ದಾಸರಾಗುತ್ತಿದ್ದೇವೆ. ಬುದ್ಧ, ಗಾಂಧೀಜಿಯ ನಾಡು ಅವರುಗಳ ತತ್ವವನ್ನು ಮರೆತು ಪ್ರಾಪ್ರಂಚಿಸುಖದಂತ ಏನನ್ನು ಮಾಡಲು ಹೇಸದಷ್ಟರ ಮಟ್ಟಿಗೆ ಹಣ, ಅಧಿಕಾರ ಗಳಿಸುವುದರಲ್ಲಿ ನಿರತರಾಗಿದ್ದೇವೆ. ಒಬ್ಬ ಯಾವುದೋ ರೀತಿಯಲ್ಲಿ ಹಣಗಳಿಸಿ ಸಮಾಜದಲ್ಲಿ ತನ್ನ ಮೇಲ್ಮೆಯನ್ನು ತೋರಿಸಲು ಹೋದರೆ ಮತ್ತೊಬ್ಬ ಅವನಿಗಿಂತ ನಾನೇನು ಕಡಿಮೆ ಎಂಬ ಧೋರಣೆಯಿಂದ ನ್ಯಾಯವಲ್ಲದ ರೀತಿಯಿಂದ ಹಣ ಸಂಪಾದನೆಯ ದಾರಿ ಕಂಡುಹಿಡಿದು ಇನ್ನೊಬ್ಬನ ಸರಿಸಮಾನ ಬಾಳ್ವೆ ನಡೆಸಲು ಹವಣಿಸುತ್ತಿರುತ್ತಾನೆ. ಇದರಿಂದಾಗಿ ಹಿಂದೆ ಇದ್ದ ಸರಳ ಜೀವನದ ದಾರಿ ಮರೆತು ಹೋಗಿದೆ. ತನ್ನಲ್ಲಿ ಇಲ್ಲದಿದ್ದರೂ ಇದ್ದವನಂತೆ ತೋರಿಸಿಕೊಂಡು ಡಂಬಾಚಾರದ ಜೀವನವನ್ನು ನಡೆಸುತ್ತಿದ್ದಾನೆ.

ಇದರಿಂದಾಗಿ ಒಬ್ಬರಿಂದೊಬ್ಬರಿಗೆ ದ್ವೇಷ, ಅಸೂಯೆ ಹೆಚ್ಚಾಗಿ ಪ್ರತಿಯೊಬ್ಬರಲ್ಲಿ ತನ್ನ ತನದ ಮೇಲ್ಮೈಗಾಗಿ ಸರಳತನ, ಸತ್ಯ ಪ್ರೀತಿಯಿಂದ ವಂಚಿತನಾಗಿ ಮನುಷ್ಯ ಮನುಷ್ಯರಲ್ಲಿ ಪ್ರೀತಿ ವಿಶ್ವಾಸ ಕಡಿಮೆಯಾಗಿ ವ್ಯಕ್ತಿಗತವಾದ ಮನಶಾಂತಿ ಕಡಿಮೆಯಾಗಿ ಕತ್ತು ಕುಯ್ಯುವ ಸ್ಪರ್ಧೆ ಉಂಟಾಗಿದೆ.

ಒಬ್ಬ ಒಂದು ವಾಹನ ಖರೀದಿಸಿದರೆ ತಾನೇನು ಅವನಿಗಿಂತ ಕೀಳು ಎಂಬ ಡಂಬಾಚಾರಕ್ಕಾಗಿ ಅನೈತಿಕ ರೀತಿಯಿಂದಲಾದರೂ ತಾನೊಂದು ವಾಹನ ಹೊಂದಿರಬೇಕೆಂಬ ಪ್ರಯತ್ನ ಮಾಡುತ್ತಾನೆ. ಈ ರೀತಿ ಸ್ಪರ್ಧೆಯಿಂದಾಗಿ ಬಡವ, ಬಲ್ಲಿದರು, ವಿದ್ಯಾವಂತ–ಅವಿದ್ಯಾವಂತರ ನಡುವೆ ಬೇದ ಹೆಚ್ಚೆಚ್ಚು ಬೆಳೆಯುತ್ತಾ ಹೋಗುತ್ತಿದೆ.

ಐಶ್ವರ್ಯವಂತ ವಿದ್ಯಾವಂತರು ತಮ್ಮ ವಿಲಾಸ ಜೀವನಕ್ಕಾಗಿ ಪಾಶ್ಚಾತ್ಯ ಉಡುಗೆ–ತೊಡಿಗೆ, ಊಟ–ಉಪಚಾರ, ಆಚಾರ–ವಿಚಾರಗಳಿಗೆ ಮಾರು ಹೋಗಿ ತಮ್ಮ ಸಂಸ್ಕೃತಿಯನ್ನೇ ಮರೆತಿದ್ದಾರೆ. ಬೇರೆಯವರು ಮಾಡುತ್ತಿದ್ದಾರಲ್ಲಾ ನಾವೇಕೆ ಮಾಡಬಾರದೆಂಬ ಸ್ವಾರ್ಥ ಭಾವನೆ ಮಧ್ಯಮ ವರ್ಗದವರಲ್ಲೂ ಹುಟ್ಟಿ ಅವರೂ ಸಹ ಹಣವಂತರ, ವಿದ್ಯಾವಂತರ ಹಾದಿಯನ್ನೇ ಅನುಸರಿಸುತ್ತಿದ್ದಾರೆ. ಇದರಿಂದಾಗಿ ಸರಳ ಜೀವನಕ್ಕೆ, ನ್ಯಾಯ ಧರ್ಮದ ಹಾದಿಗೆ ದೊಡ್ಡ ದೊಡ್ಡ ಕಲ್ಲುಗಳನ್ನು ಹಾಕಿಕೊಂಡಿದ್ದಾರೆ.

ನವ ನಾಗರೀಕತೆಯ ಕೊಡುಗೆಯಾಗಿರುವ ದೂರದರ್ಶನ ಸಿನಿಮಾಗಳಲ್ಲಿ ಅಶ್ಲೀಲ ಅಭಿನಯಗಳು ಹೆಚ್ಚಾಗಿವೆ. ನಮ್ಮ ದೂರದರ್ಶನಗಳು ಪ್ರತೀದಿನ ನವ ಸಂಸ್ಕೃತಿಯ ಮೇಲೆ ಹೈಡ್ರೋಜನ್ ಬಾಂಬನ್ನು ಎಸೆಯುತ್ತಿದ್ದಾರೆ. ಯುವಕ ಯುವತಿಯರಿಗೆ ಡಕಾಯಿತಿ ಮಾಡಿ ಹೊಡೆದಾಡುವ ದೃಶ್ಯಗಳು, ವಿದ್ಯಾವಂತ ಯುವಕ ಯುವತಿಯರು ಮದುವೆಯಾದ ಕೆಲವೇ ದಿವಸಗಳಲ್ಲಿ ಒಬ್ಬರನೊಬ್ಬರ ನಡತೆಯಲ್ಲಿ ಸಂಶಯ ಪಟ್ಟು ಅವರುಗಳು ಕೋರ್ಟಿಗೆ ಹೋಗುವ ದೃಶ್ಯಗಳು, ಕೋರ್ಟಿನಲ್ಲಿ ವಕೀಲರು ವಿವಾಹ ವಿಚ್ಛೇದನ ಬಗ್ಗೆ ಮಾಡುವ ವಾದ ವಿವಾದಗಳಂತಹ ನಾಟಕಗಳನ್ನು ನೋಡಲು ಬಹಳ ಶ್ರದ್ಧೆಯಿಂದ ಕೂಡುತ್ತಾರೆ. ಕೊನೆಗೆ ಆ ರೀತಿಯ ದೃಶ್ಯಗಳನ್ನು ತಮ್ಮ ನಿಜ ಜೀವನದಲ್ಲಿ ಅಳವಡಿಸಲು ಕಾತುರರಾಗಿರುತ್ತಾರೆ.

ನಮ್ಮ ಋಷಿವರ್ಯರು ತಮ್ಮ ಜೀವನವನ್ನೇ ಮುಡುಪಾಗಿಟ್ಟು ತಪಸ್ಸನ್ನಾಚರಿಸಿ ನಾವು ತಿಳಿದಿರುವುದಕ್ಕಿಂತ 3–4 ಸಾವಿರ ವರ್ಷಗಳ ಹಿಂದೆ ಗಣಿತ, ವೈದ್ಯ ಶಾಸ್ತ್ರ, ವಿಜ್ಞಾನದಲ್ಲಿ ಬಹಳ ಧೀರ್ಘ ಜ್ಞಾನ ಪಡೆದವರು ಸರಳ ಜೀವನವನ್ನು ನಡೆಸಿದ ಸಿದ್ಧಾಂತಗಳೂ ಇಂದಿಗೂ ಸತ್ಯವಾಗಿವೆ. ಇಂತಹ ಜ್ಞಾನವನ್ನು ನಮ್ಮ ಹಿರಿಯರು ಸತ್ಯದಿಂದ, ಶ್ರಮದಿಂದ ಸರಳ ಜೀವನದಿಂದ ಸಾಧಿಸಿದರೇ ಹೊರತು ಈಗಿನಂತೆ ಪಾಶ್ಚಾತ್ಯ ಅನುಕರಣೆ, ಸ್ವರ್ಗೀಯ ಪಾನೀಯಗಳು, ಹೊಸ ಬಗೆಯ ವಾಹಕ ಯಂತ್ರ, ಬೆಲೆಬಾಳುವ ಅಣಿಮಾಡಿದ ಆಹಾರ, ಸುಂದರವಾದ ಉಡಿಗೆ ತೊಡಿಗೆ, ಮಹಾ ವೈಭವದಿಂದ ಕೂಡಿದ ಅರಮನೆಗಳು, ಲಜ್ಜಾ ಹೀನ ಸ್ವೇಚ್ಛಾ ವಿಹಾರಿ, ವಿಚಿತ್ರ ವಸನ ನಾರಿಯರ ನೂತನ ಭಾವ ಪೂರಕ ಭಂಗಿ ಇವೆಲ್ಲ ಹಿಂದೆ ಭರತ ಖಂಡದಲ್ಲಿ ಕಂಡರಿಯದ ಆಸೆಯನ್ನು ಪ್ರಚೋದಿಸುತ್ತವೆ. ಇದಕ್ಕಾಗಿ ಹಣ, ಆಸ್ತಿ, ಅಧಿಕಾರದ ಆಸೆಯಿಂದ ಜೀವನ ಮೌಲ್ಯ ಕಳೆದುಕೊಳ್ಳುತ್ತಿರುವುದು ಸಂಗಾತಿಗೆ ವ್ಯಥೆಯುಂಟುಮಾಡಿದೆ ಇದನ್ನು ತಡೆಗಟ್ಟಲು ಸಮಾಜ ಪ್ರಯತ್ನಿಸುವುದೇ ? ○

## ಒಂದು ನೈಜ ಕಿರು ಸಂಭಾಷಣೆ

ಯಾವುದೋ ಯೋಚನೆಯ ಗುಂಗಿನಲ್ಲಿ ನಡೆಯುತ್ತಿದ್ದ ನಾನು 'ಎನ್ನ ಮೋಳೆ ಚಾಯಿತೆ ಉಳ್ಳಿಯಾ?' [ಏನು ಮಗಳೇ ಚೆನ್ನಾಗಿದ್ದೀಯಾ] ಎಂಬ ಪರಿಚಿತ ಧ್ವನಿ ಕೇಳಿ ವಾಸ್ತವಕ್ಕೆ ಬಂದೆ. ಟೈಲರ್ ಅಂಗಡಿಯ ಮುಂದೆ ನಿಂತಿದ್ದ ಅಜ್ಜಿಯನ್ನು ನೋಡಿ ನಕ್ಕು ನಾ ಚಾಯಿತೆ ಉಳ್ಳೆ ನಿಂಗ ಚಾಯಿತೆ ಉಳ್ಳೀರಾ [ನಾನು ಚೆನ್ನಾಗಿ ಇದ್ದೇನೆ ನೀವು ಚೆನ್ನಾಗಿ ಇದ್ದೀರಾ] ಎಂದು ಕುಶಲ ಪ್ರಶ್ನೆಗಳಾಗುತ್ತಿದ್ದಾಗ, ನಿಂಗ ಪೋಪಿಲ್ಲೆ ಮೋಳಕ್ಕ್, ಉದ್ದಕೈ ಬ್ಲೌಸ್ ನಿಂಗಕ್ ಬೋಂಡಾ ? [ನೀವು ಹೋಗುವುದಿಲ್ಲವೆ ಮೋಳಕ್ಕೆ ? ಉದ್ದಕೈ ಬ್ಲೌಸ್ ನಿಮಗೆ ಬೇಡವೆ ?] ಎಂದು ಕೊಂಚ ಕೊಡಗು ಭಾಷೆ ತಿಳಿದ ಮಂಗಳೂರಿನ ಟೈಲರ್ ಕೇಳಿದನು. ಆದಕ್ಕೆ ನಾನು ನಗುತ್ತಾ ನಾವು ಕೊಡಗಿನ ಗೌಡರು ಮರಾಯ. ಇವರು ನಮ್ಮನ್ನು ಎಲ್ಲಿ ಸೇರಿಸಿಕೊಳ್ಳುತ್ತಾರೆ ಎಂದು ಪ್ರಶ್ನಾರ್ಥಕವಾಗಿ ಅಜ್ಜಿಯ ಕಡೆ ನೋಡಿದೆ. 'ಅನ್ನನ್ನೆಲ್ಲಾ ಇಲ್ಲೆ ಮೋಳೆ. ಕೊಡಗ್‌ಕಾರ ನಂಗ ಎಲ್ಲಾರು ಒಂದೇ. ನೀನ್ ಅನ್ನನ್ನೆಲ್ಲಾ ಗ್ಯಾನ ಮಾಡಿಯೆಂಡ್ ಬರತೆ ಇರಂಡ ಆಚಾ, ಖಂಡಿತಾ ಬರೊಂಡು' [ಹಾಗೆಲ್ಲಾ ಏನೂ ಇಲ್ಲ ಮಗಳೆ, ನಾವು ಕೊಡಗಿನವರು ಎಲ್ಲರೂ ಒಂದೇ. ನೀನು ಹಾಗೆಲ್ಲಾ ತಿಳಿದುಕೊಂಡು ಬರದೆ ಇರಬೇಡ ಆಯಿತೆ ! ಖಂಡಿತಾ ಬರಬೇಕು] ಎಂದು ಹೇಳಿದರು. ಅಷ್ಟೊತ್ತಿಗೆ ಟೈಲರ್ ಹೇಳಿದ. ನೀವು ಗೌಡರು ಕೊಡಗಿನಲ್ಲಿ ಹೇಗೆ ಸೇರಿಕೊಂಡಿರಿ ಎಂದು. ಆದಕ್ಕೆ ನಾನು ಹೇಳಿದೆ ನಾವು ಹೋಗಿ ಸೇರಿಕೊಂಡಿಲ್ಲ. ಸುಳ್ಯ ಸಂಪಾಜೆ ಸೇರಿದ ಹಾಗೆ ಮಡಿಕೇರಿ ತಾಲ್ಲೂಕಿನವರೆಗೂ ಮೊದಲಿನಿಂದಲೂ ಅಲ್ಲಿನ ನಿವಾಸಿಗಳಾಗಿದ್ದರು. ಈಗಲೂ ಮಡಿಕೇರಿ ತಾಲೂಕಿನಲ್ಲಿ ಗೌಡರೇ ಹೆಚ್ಚಾಗಿ ಇರುವುದು ಇದಕ್ಕೆ ಸಾಕ್ಷಿ ಎಂದು ಹೇಳಿದೆ. ಅಲ್ಲದೆ ಕೊಡವರು ಎಂದು ಹೇಳಿಕೊಳ್ಳುವ ಇವರೇನು ಮೊದಲಿನಿಂದಲೂ ಕೊಡಗಿನಲ್ಲಿ ಇದ್ದವರಲ್ಲ. ತಮಿಳು ನಾಡಿನಿಂದ ವಲಸೆ ಬಂದವರು ಎಂದು ಹೇಳಿದೆ. ಆಗ ಅಜ್ಜಿ ಹೇಳಿದರು. ಈ...'ಅನ್ನನೆ ಅಲ್ಲ ಮೋಳೆ, ನೀಕ್ ಗೊತ್ತ್‌ಲೆ, ನಂಗ ಮಳಯಾಳತ್ತ್‌ಂಜಿ ಬಂದ್ಯೆಂಗ [ಈ...ಅಲ್ಲ ಮಗಳೆ, ನಿನಗೆ ಗೊತ್ತಿಲ್ಲ ನಾವು ಮಲಯಾಳ [ಕೇರಳ]ದಿಂದ ಬಂದವರು]. 'ಅದ್ ಆಯಿತ್ತಿಕ್ಕು ತಾಯಿ, ಕೊಡವಂಗ ಭಾರಿ ಕಿಲಾಡಿಯ, ಅನ್ನನ್ನೆಲ್ಲಾ ಗುಟ್ಟ್ ಬುಡುಲೆ' ಇಕ್ಕ ನಿಂಗ ಎಣ್ಣತೆ ಪೋಚೆಂಗಿ ನಾಕ್ ಗೊತ್ತಾಪ ಇಂಜತ್ತ್‌ಲೆ. ನಾನ್ ನಿಂಗ ತಮಿಳ್‌ಕಾರಂಗಾಂದೆ ಗ್ಯಾನ ಮಾಡಿಯುಂಡ್ ಇಪ್ಪಯಿಂಜ [ಕೊಡವರು ಬಹಳ ಕಿಲಾಡಿಗಳು ತಾಯಿ, ಹಾಗೆಲ್ಲ ಗುಟ್ಟು ಬಿಡುವುದಿಲ್ಲ. ನೀವು ಹೇಳದೇ ಹೋಗಿದ್ದರೆ ನನಗೆ ಗೊತ್ತಾಗುತ್ತಿರಲಿಲ್ಲ. ನೀವು ತಮಿಳರೆಂದೇ ನಾನು ತಿಳಿದುಕೊಳ್ಳುತ್ತಿದ್ದೆ]. ಗುಟ್ಟು ಹೇಳಿದ್ದಕ್ಕೆ ಥ್ಯಾಂಕ್ಸ್ ಹೇಳಿದೆ. ಏ ಅದೆಲ್ಲಾ ಎಂಥ ಗುಟ್ಟು, ಇರುವುದು ಹೇಳಿದೆ, ಅದೆಲ್ಲಾ ಇರಲಿ ಬಿಡು. ನೀನು ಮೋಳಕ್ಕೆ ಮಾತ್ರ ತಪ್ಪಿಸಿಕೊಳ್ಳಬೇಡ. ಎಂದು ಹೇಳಿ ಟೈಲರ್ ಹತ್ತಿರ ಬ್ಲೌಸ್ ಪಡೆದು ಎಪ್ಪತ್ತರ ಅಜ್ಜಿ ಇಪ್ಪತ್ತರ ಯುವತಿಯ ಹಾಗೆ ಲವಲವಿಕೆಯಿಂದ ಕೊಡವ ಮೋಳದ ಮುಂಡಿಗೆ ಮನದಲ್ಲಿ ಮೆಲ್ಲುತ್ತಾ ಹೊರಟರು. ನಾನು ಕೂಡ ಏನೋ ಸಾಧಿಸಿದ ವಿಜಯದ ನಗುವನ್ನು ಮುಖದಲ್ಲಿ ತುಂಬಿಕೊಂಡು ಮನೆಯ ಕಡೆ ಹೆಜ್ಜೆ ಹಾಕಿದೆ... ○

—ಬಿಟ್ಟೀರ ಚೋಂದಮ್ಮ ಶಂಭು,
ಬೆಂಗಳೂರು.

## ಚಾಣೆಗೆ ಹೆಸರು ಬಂದದ್ದು

ಒಮ್ಮೆ ಚಾಣೆಗೆ ಮಂಗಳೂರಿನಲ್ಲಿರುವ ಮಗಳು ಕಾಗದ ಬರೆದಳು. ಚಾಣೆಯ ಯಜಮಾನನ ಮೂಲಕ. ಅಪ್ಪ ನೀವು ನನ್ನನ್ನು ಮದುವೆ ಮಾಡಿ ತುಂಬಾ ವರ್ಷಗಳಾದವು. ಹೇಗಾದರೂ ಮಾಡಿ ಬಂದು ಹೋಗಿ ಎಂದು. ಯಜಮಾನ ವಿಷಯ ಓದಿ ತಿಳಿಸಿದ. ಚಾಣೆಗೆ ಬಾರಿ ಸಂತೋಷ ಜೊತೆಗೆ ಹೆದರಿಕೆ. ಬಸ್ ಹತ್ತಿದವನಲ್ಲ, ಊರು ಹೊಸತು. ಯಜಮಾನನ ಹತ್ತಿರ ವಿಳಾಸ, ಹಣ ಪಡೆದು ಸಜ್ಜಾದ. ಪಾಪ ಅನಕ್ಷರಸ್ಥ ಬೇರೆ. ಬೇರೆ ಯಾವ ಬಸ್ ಇಲ್ಲದ ಕಾರಣ ಯಜಮಾನ ಇವನನ್ನು ಸೂಪರ್ ಡಿಲಕ್ಸ್ ಹತ್ತಿಸಿ ಹೇಳಿದ, ಚಾಣೆ ಜಾಗ್ರತೆ, ಯಾರ ಜೊತೆ ಮಾತನಾಡಬೇಡ. ಕಾಲ ಕೆಟ್ಟದು ಅಂತ. ಮಗಳಿಗೆ ಕಾಗದ ಬರೆದಿದ್ದೇನೆ. ಅಪ್ಪನಿಗಾಗಿ ಬಸ್‌ಸ್ಟ್ಯಾಂಡ್‌ನಲ್ಲಿ ಕಾಯುತ್ತಿರು. ಹೀಗೆ ಹೇಳಿದ.

ಸರಿ. ಚಾಣೆಗೆ ಸೀಟು ಸಿಕ್ಕಿತು. ಭಾರಿ ಬಸ್, ಟಿ.ವಿ. ಫ್ಯಾನ್ ಇತ್ಯಾದಿ. ಚಾಣೆಗೆ ಎಲೆಅಡಿಕೆ ತಿಂದು ಅಭ್ಯಾಸ. ಎಲೆ ಅಗಿದು ತಿಂದ. ಕ್ಯಾಕರಿಸಿ ಕಿಟಕಿಯಾಚೆ ಉಗಿದ. ಇವನ ಹಿಂದಿನ ಸೀಟಿನಲ್ಲಿ ಇಬ್ಬರು ಆಂಗ್ಲೋ ಇಂಡಿಯನ್ ಇದ್ದರು. ಎಲೆ ಅಡಿಕೆ ಉಗುಳು ಇವರಿಗೆ ಬಿತ್ತು. ಒಬ್ಬ ಹೇಳಿದ ಹೇ 'stop it'. ಚಾಣೆ ಸುಮ್ಮನೆ ನಗಾಡಿದ. ಇನ್ನೂ ಸ್ವಲ್ಪ ದೂರ ಹೋದ ಮೇಲೆ ಪುನಃ ಎಲೆ ಅಡಿಕೆ ಉಗುಳಿದ. ಈಗ ಇನ್ನೊಬ್ಬನ ಸರದಿ. 'stop it, last warning'. ಈಗಲೂ ಚಾಣೆ ನೆಗಾಡಿ ಸುಮ್ಮನಾದ. ಇನ್ನೇನು ಮಂಗಳೂರು ಬರುತ್ತಿದ್ದ ಹಾಗೆ ಚಾಣೆ ಅಭ್ಯಾಸ ತೋರಿಸಿದ. ಈಗ ಇಬ್ಬರಿಗೂ ಸಿಟ್ಟು ಬಂದು ಚಾಣೆ ತಲೆಗೆ ಸರಿಯಾಗಿ ಬಾರಿಸಿದರು.

[4ನೇ ಪುಟ ನೋಡಿ]

# ಮದೆನಾಡಿನ ವನಸಿರಿಯ ರಾಜ್ಯಪ್ರಶಸ್ತಿ ಶಿಕ್ಷಕ, ತೊತ್ತಿಯನ ಉತ್ತಯ್ಯ ಮಂದಣ್ಣ

ಶ್ರೀ ಮಂದಣ್ಣನವರು ತೊತ್ತಿಯನ ಶ್ರೀ ಉತ್ತಯ್ಯ ಮತ್ತು ಶ್ರೀಮತಿ ಪೂವಮ್ಮನವರ ಜೇಷ್ಠ ಪುತ್ರ. ಮಡಿಕೇರಿ ತಾಲೂಕಿನ ಬಾಡಗ ಗ್ರಾಮದಲ್ಲಿ 1943 ಮೇ 25ರಂದು ಜನಿಸಿದರು. ಅದೇ ಗ್ರಾಮದ ಪ್ರಾಥಮಿಕ ಶಾಲೆಯಲ್ಲಿ 5ನೇ ತರಗತಿವರೆಗೂ, 6ರಿಂದ 7ರವರೆಗೆ ಮರಗೋಡಿನಲ್ಲೂ, 8ರಿಂದ ಪಿ.ಯು.ಸಿ.ವರೆಗೆ ಸೆಂಟ್ರಲ್ ಹೈಸ್ಕೂಲ್ ಮಡಿಕೇರಿಯಲ್ಲೂ ಬಿ.ಎಸ್ಸಿ. ಪದವಿಯನ್ನು ಸಹ್ಯಾದ್ರಿ ಕಾಲೇಜು ಶಿವಮೊಗ್ಗದಲ್ಲೂ, ಬಿ.ಇಡಿ. ಪದವಿಯನ್ನು ಅಂಚೆ ತೆರಪಿನ ಶಿಕ್ಷಣ ಸಂಸ್ಥೆ, ಮೈಸೂರಿನಲ್ಲೂ ಪಡೆದರು.

ಮಂದಣ್ಣನವರು ಪಿ.ಯು.ಸಿ. ವಿದ್ಯಾಭ್ಯಾಸದ ಬಳಿಕ ಶಿಕ್ಷಕರಾಗಿ ಸೇವೆಗೆ ಧುಮುಕಿದರು. ಆಗ ಇವರ ವಯಸ್ಸು ಕೇವಲ 18 ವರ್ಷಗಳು ! ಇವರ ಸೇವೆ ಪಡೆದ ಮೊದಲ ಶಾಲೆ ಮಡಿಕೇರಿ ತಾಲೂಕಿನ ಸರಕಾರಿ ಪ್ರಾಥಮಿಕ ಶಾಲೆ ದಬ್ಬಡ್ಕ. ನಂತರ ಸ.ಹಿ.ಪ್ರಾ. ಶಾಲೆ ಪೆರಾಜೆಯತ್ತ ಸೇವೆಗಾಗಿ ಹೊರಟರು. ಅದು 1961ರಿಂದ 64ರವರೆಗಿನ ಕಾಲ. ಈ ಕಾಲದಲ್ಲಿ ಇವರ ಮನಸ್ಸಿನಲ್ಲಿ ತಾನೇಕೆ ಪದವೀಧರನಾಗಬಾರದೆಂಬ ಭಾವನೆ ಮೊಳೆಯಿತು. ಆ ಭಾವನೆಯನ್ನು ಪೋಷಿಸಿ ಬೆಳೆಸಿದರು. ಸಹ್ಯಾದ್ರಿ ಕಾಲೇಜಿನಲ್ಲಿ ಪದವಿ ಪಡೆದು, ಓದಿ ಬಂದು ಸಂಪಾಜೆ ಪ್ರೌಢಶಾಲೆಯಲ್ಲಿ ಶಿಕ್ಷಕರಾದರು. 1961ರಿಂದ 68ರವರೆಗೆ ಇಲ್ಲಿದ್ದಾಗ ತಾನೇಕೆ ಬಿ.ಇಡಿ. ಪದವಿ ಪಡೆಯಬಾರದೆಂಬ ಆಸೆಯುಂಟಾಯಿತು. ಆ ಪದವಿಯ ಮಾಲೆ ಧರಿಸಿದ ಇವರು ಮುಂದೇನೆಂಬ ಪ್ರಶ್ನೆ ಕಾಡಿತು. ಆಗ ಕಂಡದ್ದು ಮರಗೋಡಿನ ಭಾರತಿ ಪ್ರೌಢಶಾಲೆ. ಅಲ್ಲಿ ಸಹ ಶಿಕ್ಷಕರಾಗಿ 1970ರಿಂದ 78ರವರೆಗೆ ದುಡಿದರು. ಅನಂತರ 1978ರಿಂದ 82ರವರೆಗೆ ಶ್ರೀ ಕ್ಷೇತ್ರ ಭಾಗಮಂಡಲದ ಶ್ರೀ ಕಾವೇರಿ ಜೂ. ಕಾಲೇಜಿನಲ್ಲಿ ಸಹ ಶಿಕ್ಷಕರಾಗಿ ದುಡಿದರು. ಆ ಬಳಿಕ ಮುಖ್ಯೋಪಾಧ್ಯಾಯರಾಗಿ, ಪ್ರಾಂಶುಪಾಲರಾಗಿ ಮಡಿಕೇರಿ ತಾಲ್ಲೂಕಿನ ಮದೆ ಮಹೇಶ್ವರ ಪ. ಪೂ. ವಿದ್ಯಾಲಯದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.



ಮಂದಣ್ಣನವರು ಕಾಲೇಜು ವಿದ್ಯಾಭ್ಯಾಸದ ಸಂದರ್ಭದಲ್ಲಿ ಹಾಕಿ ಕ್ರೀಡಾಪಟುವಾಗಿದ್ದು, 3ನೇ ವರ್ಷದಲ್ಲಿ ಆ ಕಾಲೇಜಿನ ಹಾಕಿ ತಂಡದ ಕ್ಯಾಪ್ಟನ್ ಆಗಿ ಮಿಂಚಿದರು. 1966ರಲ್ಲಿ ದೆಹಲಿಯಲ್ಲಿ ನಡೆದ ಆರ್.ಡಿ. ಪೆರೇಡ್‌ನಲ್ಲಿ ಎನ್.ಸಿ.ಸಿ.ಯ ಬೆಟಾಲಿಯನ್ ಸೀನಿಯರ್ ಅಂಡರ್ ಆಫೀಸರ್ ಆಗಿ ಶಿಸ್ತನ್ನು ಮೆರೆದರು.

ಇವರು ಸೇವೆ ಸಲ್ಲಿಸಿದಲ್ಲೆಲ್ಲಾ ಕೃಷಿಗೇ ಹೆಚ್ಚು ಒತ್ತು ಕೊಟ್ಟಿದ್ದಾರೆ. ಮದೆ ಪ್ರೌಢಶಾಲೆಯ ಬೆಳವಣಿಗೆಗೆ ಸಾಕಷ್ಟು ಶ್ರಮಿಸಿದ್ದಾರೆ. ಇದು ಶಿಕ್ಷಕರು ವಿದ್ಯಾರ್ಥಿಗಳ ನೆರವಿನಿಂದ ಇಟ್ಟಿಗೆ ಶಿಬಿರ, ಈಜುಕೊಳ, ರೇಷ್ಮೆ ಕೃಷಿ, ಕಾಫಿ ತೋಟ, ಕಟ್ಟಡ ನಿರ್ಮಾಣ, ಆಟವ ಮೈದಾನ ನಿರ್ಮಿಸುವಲ್ಲಿ ಶ್ರಮಿಸಿದ್ದಾರೆ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಸರಾಸರಿ ಶೇ. 66 ಫಲಿತಾಂಶನನ್ನು ಕಾಯ್ದುಕೊಂಡಿದ್ದಾರೆ. ಪಠ್ಯೇತರ ಚಟುವಟಿಕೆಗಳಾದ ಯೋಗ ಶಿಕ್ಷಣ, ನೃತ್ಯ, ಕರಾಟೆ, ಎನ್.ಸಿ.ಸಿ. ಮುಂತಾದವುಗಳಿಗೆ ಅವಕಾಶ ಕಲ್ಪಿಸಿದ್ದರು.

ಇವರು ಹೋದೆಡೆಯಲ್ಲೆಲ್ಲಾ ಕಾಣುವುದು 'ಹಳೇ ವಿದ್ಯಾರ್ಥಿ' ಬಳಗ. 'ಇವರಿದ್ದಾರೆ ನೋಡಿ, ಇವರಿಗೂ ಪಾಠ ಹೇಳಿದ್ದೇನೆ, ಇವರ ಮಗನಿಗೂ ಪಾಠ ಹೇಳಿದ್ದೇನೆ' ಎಂದು ಕೆಲವರನ್ನು ಪರಿಚಯ ಮಾಡಿಕೊಡುವುದುಂಟು. ಇವರ ಪ್ರಾಥಮಿಕ ಶಾಲಾ ಶಿಕ್ಷಕ ಸೇವೆ ಇತ್ಯಾದಿಗಳನ್ನು ಲೆಕ್ಕ ಹಾಕಿದರೆ 31 ವರ್ಷಗಳ ಸುದೀರ್ಘ ಸೇವೆ ವಿದ್ಯಾಕ್ಷೇತ್ರಕ್ಕೆ ಸಂದಿದೆ.

ಶ್ರೀಯುತರ ಸೇವೆಯನ್ನು ಗಮನಿಸಿದ ಕೊಡಗು ಜಿಲ್ಲಾ ಶಿಕ್ಷಣ ಇಲಾಖೆ 1991ರಲ್ಲಿ ಜಿಲ್ಲಾ ಅತ್ಯುತ್ತಮ ಶಿಕ್ಷಕ ಪ್ರಶಸ್ತಿ ನೀಡಿ ಗೌರವಿಸಿತು. ಈಗ ರಾಜ್ಯ ಅತ್ಯು

[20ನೇ ಪುಟ ನೋಡಿ]

[ಹಿಂದಿನ ಪುಟದಿಂದ]

## ಚಾಣೆಗೆ ಹೆಸರು ಬಂದದ್ದು

[ರಭಸಕ್ಕೆ ಕೆಲವು ಕೂದಲು ಹಾರಿದೆ] ತೆಪ್ಪಗಾದ ಚಾಣೆ. ಬಸ್‌ಸ್ಟ್ಯಾಂಡ್ ಬಂತು. ಚಾಣೆ ಇಳಿದಾಗ ಮಗಳು, ಅಳಿಯ, ಮೊಮ್ಮಗ ಹಾಜರ್. ಮಗಳು ಕೇಳಿದಳು ಅಪ್ಪ ಚೆನ್ನಾಗಿದ್ದೀರಾ ಮನೆಯಲ್ಲಿ ಕ್ಷೇಮವೆ? ಅಳಿಯ ಕೇಳಿದ ಪ್ರಯಾಣ ಹೇಗಿತ್ತು ಮಾವ? ಎಲ್ಲರೂ ಕ್ಷೇಮ. ಬಸ್ ಬಾರಿ ಚೆನ್ನಾಗಿತ್ತು ಅಂತ. ಆದರೆ? ಆದರೆ ಏನು ಮಾವ ಅಳಿಯ ಕೇಳಿದ. ಅದ್ರೆ ಎಲೆ ಅಡಿಕೆ ತಿಂದು ಉಗಿವಾಗ ತಲೆಗೆ ಬಗ್ಗಿಸಿ ಹೊಡೆಯುತ್ತಾರಲ್ಲ ಅದು ಮಾತ್ರ ಸಹಿಸಕ್ಕಾಗುವುದಿಲ್ಲ. ಇವನೇ ಪ್ರಶ್ನೆ ಹಾಕಿದ. ಇದು ಕೇಳಿ ಅಳಿಯ ಮಗಳು ಸುಸ್ತು. ಪಕ್ಕದಲ್ಲಿದ್ದ ಮೊಮ್ಮಗ ಹೇಳಿದ ಈಗ ಗೊತ್ತಾಯ್ತು ತಾತ. ನಿನ್ನ ತಲೆ ನೋಡಿ ನಿನ್ನ ಚಾಣೆ ಅಂತ ಎಲ್ಲಾ ಕರೆಯೋದು ಅಲ್ಲ. ○

—ಬಾರಿಕೆ ಎನ್. ಲಿಂಗರಾಜ್,
ತಾವೂರು.

# ಗೌಡರ ವಿವಾಹ ಪದ್ಧತಿಯ ಶೋಭಾನೆಗಳು

[ಹಿಂದಿನ ಸಂಚಿಕೆಯಿಂದ]

**ತಲೆ ಬಾಚುವ ಹಾಡು :**

ಮುತ್ತಿನ ಚಪ್ಪರದೊಳಗೆ ಸುತ್ತೇಳು ದೀವಿಗೆ ಬೆಳಗಿರಲು। ಓರಣದಿಂದಲಿ ಬಂದು ಹಸೆಗಳ ಬರೆದು ॥ ಕರುಣೆ ಕಲಸಿದ ಹಸೆ ಮಣೆಗಳ ತಂದಿರಿಸಿ । ಹಸಿರು ಪಟ್ಟೆಗಳ ಉಪಚರಿಸಿ ಹಾಸಿ ! ಹಸಿರು ಮುತ್ತೈದೆಯರು ಕುಳ್ಳಿರಲು ಚಿನ್ನದುಪ್ಪರಿಕೆಯೊಳಗೆ ಸುತ್ತೇಳು ದೀವಿಗೆ ಬೆಳಗಿರಲು । ಓರಣದಿಂದ ಬಂದು ಹಸೆಗಳ ಬರೆದು ಕರುಣೆ ಕಲಸಿದ ಹಸೆ ಮಣೆಗಳ ತಂದಿರಿಸಿ ಜೋಡು ಪಟ್ಟೆಗಳ ಉಪಚರಿಸಿ ಹಾಸಿ । ಹಸಿರು ಮುತ್ತೈದೆಯರು ಕುಳ್ಳಿರಲು। ಬರಹೇಳಿ ಹೊರಕ್ಕೆ ಒಳಗಿರುವವರ ನಾರಿ ಸತಿ ಚೆಲುವೆ ಚೆಲುವಿಕೆಯರು ತುರುಬ ನಿಕ್ಕುವರ ಬರಾ ಹೇಳಿ ॥

**ಆ) ಹೂ ಮುಡಿಸುವಾಗ ಹೇಳುವ ಹಾಡು :**

ಕೊಡು ತಾಯೆ ಕುಸುಮವನು ಶಾರದ ತಾಯೆ । ಕೊಡು ತಾಯೆ ಕುಸುಮವನು ಪರಕೀನದವನಾದ ಮರುಗ ಮಲ್ಲಿಗೆ ಜಾಜಿ ಸುರಗೆ ಸಂಪಿಗೆ ಸರವ ಕೊಡು ತಾಯೆ ಕುಸುಮವನು ॥ ಸಂತತ ಧನವಾದ ದಂತಿನವಾಸಿನಿ । ಸಂತರ ರೂಪಿನೊಳಿರುವ ಸಂಪಿಗೆ ಹೂವಿನ ಸರವ । ಕೊಡುತಾಯೆ ಕುಸುಮವನು ಶಾರದ ತಾಯೆ ಕೊಡು ತಾಯೆ ಕುಸುಮವನು ॥ ಎಲ್ಲರ ಮನಸ್ಸಿಗೆ ಉಲ್ಲಾಸ ತೋರುವ । ಬಲ್ಲವರು ಮೆಚ್ಚಿದ ಮಲ್ಲಿಗೆ ಹೂವಿನ ಸರವ ಕೊಡು ತಾಯೆ ಕುಸುಮವನು ॥ ಅರಳಿದ ಮಲ್ಲಿಗೆ ಜಾಜಿ ಪರಿಮಳದ ಪುಷ್ಪಗಳನು । ಸುರರು ತಂದಿರುವರು । ವನಿತೆ ಜಾನಕಿಗೆ । ಕೊಡು ತಾಯೆ ಕುಸುಮವನು ॥

**ಇ) ವಧುವನ್ನು ಶೃಂಗರಿಸುವಾಗ ಹೇಳುವ ಹಾಡು :**

ಪಂಕಜಾಕ್ಷನ ಸತಿಗೆ ಕುಂಕುಮಾಕ್ಷತೆ ತಳಿದು ಮಂಕಿ ಬಳೆಯನಿಟ್ಟು । ನಾರಿಯರೆಲ್ಲ ತಂಕ ಮಾಡದೆ ತಾ ಉಟ್ಟು । ಪರಿಪರಿಯುವ ತರಿಕೆಯಿಂದಲಿ ಬರಬಿಟ್ಟು । ಕಂಕಣವನಿಟ್ಟು । ಶಂಕಿಸದೆ ಬಲು ಹರುಷದಿಂದಲಿ ಶಂಕರಾಧ್ಯರ ಸತಿಯರ ಸಹಿತಲಿ ಕಿಂಕರಾದಿ ಜನರು ಮಣಿಸುತ । ಶಂಕೆ ಇಲ್ಲದೆ ಬಗೆ ಬಗೆಯ ಸುಮ ಬಿಂಕದಿಂದಲಿ ಮುಂಡಿಸಿದರು ॥ಸೋಬಾನೆ॥ ಚಾರುರಮಣೀಯರ ವಿಚಾರಿಸಿ ಮನದೊಳು। ಸಾರವಾಗಿಹುದು ನೋಡಿ ದೋಷಗಳೆಲ್ಲ ಪಾರುವಾಗುವುದೆಂದಾಡಿ । ಗರ್ಭಿಣಿಯರು ಸೇರಿ ಶಂಕರನೆಂದೋಡಿ ಪರಿಚಯುವ ಮಾಡಿ ಮೂರು ಲೋಕದೊಳ್ ಮೆರೆವ ಕುಸುಮದೊಳ್ । ಬಾರಿ ಖ್ಯಾತಿಯನು ಪಡೆದು ಸುಲಭದೊಳಾರಿಗೂ ದೊರೆಯಲಸಾಧ್ಯದ । ವಾರಿಜಾಕ್ಷನ ರಾಣಿಗೆ ಸುರ ಪಾರಿಜಾತದ್ಹೂವ ಮುಡಿಸಿದರು ॥ಸೋಬಾನೆ॥ ಗರುಡಗಮನ ರಾಣಿ ಪನ್ನಗವೇಣಿ ಕಿರುವಿಲ್ಲ ದೊರೆಗಳು ಇಟ್ಟರು ಮತ್ತೆ । ವರ ಸ್ವರ್ಣಾಭರಣಗಳು । ಉಟ್ಟರು ಪರಿಪರಿಯ ಸೀರೆಗಳು ಮಣಿಮಯದ ಸರಗಳು । ವಾರೆ ನೋಟದ ವಾರಿ ಜಾನನೆಯರು ಸೇರಿದ । ಭಾರಿ ಸಭೆಯೊಳು । ಸಾರಸಾಕ್ಷಿಯು ಸೇರಿ ಬರುತ ಗಂಭೀರಗಾನದೊಳ್ ಏರಿ ರಭಸದಿ ಮರಗ ಮಲ್ಲಿಗೆ ಮುಡಿಸಿದರು ॥ಸೋಬಾನೆ॥ ಹಸ್ತ ಕಡಗವಿಟ್ಟು ಚಿತ್ತಜಮಾತೆಗೆ ಭೃತ್ಯ ನಾರಿಯರು ಕೂಡಿ ಆನಂದದೊಳುತ್ತಮ ಸಭೆಯ ಮಾಡಿ ತೋಪದೊಳ್ಳೈದು । ಮುತ್ತೈದೆಯರು ಕೈಗೂಡಿ । ಮಂಟಪದಿ ಪಾಡಿ ಅಸ್ತಮಯ ಕಾಲದೊಳರಳುವ ಚಿತ್ತಕೆ ಆನಂದವೀಯುವ ಪೃಥ್ವಿಯೊಳು ಬಲು ಉತ್ತಮವೆನ್ನುವ ಮತ್ತ ಕಾ ಶಿ ನಿ ಸತ್ಯಭಾಮೆಗೆ ಕಸ್ತೂರಿ ಮಲ್ಲಿಗೆ ಮುಡಿಸಿದರು ॥ಸೋಬಾನೆ॥

**ಈ) ವಧುವಿಗೆ ಸೀರೆ ಉಡಿಸುವಾಗ ಹೇಳುವ ಹಾಡು :**

ಚಿತ್ತದಿ ಗಣಪನ ಪುತ್ತಳೀರಮಣದ ಸೀರೆ ಉತ್ತಮ ಕರಣಿಕರ ಮಡದಿ ಮಹಾಲಕ್ಷ್ಮಿ ಉಡುಬಾರೆ ।

ಗೋಡೆ ಜೇಡನು ನೈದ ಹಳವಿನೋರಣದ ಸೀರೆ ನಿಚ್ಚಳು, ನಿಜಕಂಬಿ ನಟು ಬೆಳೆದು । ನಿಚ್ಚಳು ನಿಜಕಂಬಿ ನಡುಬೆಳದೋರಣದ ಸೀರೆ ರಾಣಿ ನೀನೀಗ ಉಡುಬಾರೆ । ಅಂಚಿಗೆ ಅರಗಿನ ಬಣ್ಣ ಸೆರಗೀಗೆ ಸೀತೆಯ ಬಣ್ಣ ಅಂಚಿ ಗಂಚಿಗೆ ಗಿಳಿನೂರು । ಅಂಚಿ ಗಂಚಿಗೆ ಗಿಳಿನೂರು ಬಣ್ಣದ ಸೀರೆ ರಾಣಿ ನೀನೀಗ ಉಡುಬಾರೆ । ಸೆರಗೀಗೆ ಸೀತೆಯ ಬಣ್ಣ ಅಂಚಿಗೆ ಅರಗಿನ ಬಣ್ಣ ನಡುವಿನ ಬಣ್ಣ ಗುರಗಂಜಿ । ಗುರಗಂಜಿ ಬಣ್ಣದ ಸೀರೆಯ ರಾಣಿ ನೀನೀಗ ಉಡುಬಾರೆ । ಬೊಚ್ಚಳಿಗೆ ಅಡಗುವುದು ಉಟ್ಟ ಬಣ್ಣದ ಸೀರೆ ನಾರಿಯವರು ಹೋಗಿ ಬೆಲೆಮಾಡಿ ತಂದ । ನಾರಿಯವರು ಹೋಗಿ ಬೆಲೆಮಾಡಿ ತಂದಂತಹ ಸೀರೆ ನಾರಿ ಜಾನಕ್ಕಿ ಉಡುಬಾರೆ। ಕತ್ತಲೆಗೆ ಅಂಜುವುದು ಕಾಗುಣಿಸಿ ನೆಗೆಯುವುದು ಮುತ್ತಿನ ಭರಣಿಯಲ್ಲಿ ಅಡಗುವುದು। ಮುತ್ತಿನ ಭರಣಿಯಲ್ಲಿ ಅಡಗುವ ಸೀರೆಯ ಉಡುಬಾರೆ । ಪಟ್ಟೆ ಸೀರೆಯ ಮೇಲೆ ತೇಲಾಡುವ ಗೊಂಬೆಗಳು ನಲವತ್ತೊಂದು ವರಹಕ್ಕೆ ಬೆಲೆಯಾದೊ । ನಲವತ್ತೊಂದು ವರಹಕ್ಕೆ ಬೆಲೆಯಾದ ಸೀರೆಯ ರಾಣಿ ನೀನೀಗ ಉಡುಬಾರೆ । ಮುಂದಲೇ ತಂದೆವು ಮುತ್ತು ಸಾರುವ ಮುತ್ತುರಂಗ ಪತಿಯೆಂಬ ರವಿಕೆಯ । ರಂಬೆ ನೀನೀಗ ಉಡುಬಾರೆ । ಅಗಸನಿಗೆ ಹಾಕುವುದಲ್ಲ ಬಿಸಿಲಿಗೆ ತೋರುವುದಲ್ಲ ತಾಳಿಯ ಮೇಲೆ ನೈದ ಪಟ್ಟೆಗಳ । ತಾಳಿಯ ಮೇಲೆ ನೈದ ಪಟ್ಟೆಗಳ ನಾರೀ ಜಾನಕ್ಕಿ ಉಡುಬಾರೆ । ಅಳೆದರೆ ಆರವತ್ತು ಮೊಳ ಹಿಡಿದರೆ ಹಿಡಿತುಂಬ, ಬಿಟ್ಟರೆ ಬೀದಿಯೆಲ್ಲ ತೆರೆಪಿಲ್ಲಾದ ಸೀರೆ ತರಣಿ ತಂಗಮ್ಮಳಿಗೆ ಉಡುಸ್ಯಾರು ॥ ○

[ಮುಂದುವರಿಯುವುದು]

# ಸಂಪಾಜೆ ಸಣ್ಣಯ್ಯ ಪಟೇಲರು

ಒಂದು ಸಮಾಜದಲ್ಲಿ ಕೆಲವು ವ್ಯಕ್ತಿಗಳ ಆದರ್ಶ ಬೇರೆಯವರಿಗೆ ಮಾರ್ಗದರ್ಶನವಾಗುತ್ತದೆ. ದೇಶದ ಚರಿತ್ರೆ ಒಬ್ಬೊಬ್ಬ ಮಹಾಪುರುಷರ, ರಾಜರುಗಳ ಸಾಮ್ರಾಟರ ಹಾಗೂ ರಾಷ್ಟ್ರದ ಅಧಿಕಾರ ಹೊತ್ತ ವ್ಯಕ್ತಿಗಳು ಕೈಕೊಂಡ ಪರಾಕ್ರಮ, ಆಡಳಿತ ಕ್ರಮ ಇವುಗಳ ಮೇಲೆ ಬರೆಯಲ್ಪಟ್ಟಿವೆ. ಆದರೆ ಜನ ಸಾಮಾನ್ಯರ ವಿಷಯ ಉಲ್ಲೇಖಗಳಿರುವುದಿಲ್ಲ. ಆದರೆ ಒಂದು ಸಮಾಜದಲ್ಲಿ ಆಗಿ ಹೋದ ಪ್ರಬಲ ಹಾಗೂ ಸಮಾಜದ ಏಳಿಗೆಗಾಗಿ ಶ್ರಮಿಸಿದ ವ್ಯಕ್ತಿಗಳ ಪ್ರಭಾವ ಎಷ್ಟೋ ರೀತಿಯಲ್ಲಿ ಪರಿಣಾಮವನ್ನುಂಟು ಮಾಡುತ್ತವೆ. ಆದುದರಿಂದ ಒಂದು ಸಮಾಜದ ಕುರಿತು ಪ್ರಕಟಿಸುವ ಈ ರೀತಿಯ ರತ್ನ ಸ್ಮರಣೆಗಳಲ್ಲಿ ಸಂಪಾಜೆ ಸಣ್ಣಯ್ಯ ಪಟೇಲರುಗಳಂತಹ ವ್ಯಕ್ತಿಗಳ ಜೀವನ ಚರಿತ್ರೆಗಳಿಂದ ಕೂಡಿದ ಲೇಖನಗಳು ಈ ಸಮಾಜದ ಜನರಲ್ಲಿ ತಮ್ಮ ಹಿರಿಯರು ಯಾವ ರೀತಿಯಲ್ಲಿ ತಮ್ಮ ಜೀವನವನ್ನು ಸಾಗಿಸಿದರು, ಅವರುಗಳು ಸಮಾಜಕ್ಕಾಗಿ ಏನೇನು ಕೆಲಸಗಳನ್ನು ಮಾಡಿದರೆಂಬುದರ ಅರಿವಿನಿಂದ ಯುವ ಪೀಳಿಗೆ ಇದರಿಂದ ಸ್ಫೂರ್ತಿಗೊಂಡು ತಾವು ಸಹ ಸಮಾಜದ ಕಾರ್ಯದಲ್ಲಿ ಏನನ್ನು ಮಾಡಬಹುದೆಂಬ ಅಭಿಪ್ರಾಯದಿಂದ ಸಮಾಜದ ಅಭಿವೃದ್ಧಿಗೆ ದಾರಿಮಾಡಿಕೊಡುವಂತೆ ಪ್ರೇರೆಪಿಸುವುದನ್ನು ಶ್ರೀ ಎಂ.ಬಿ. ಸದಾಶಿವರವರು ಬರೆದ ಈ ಲೇಖನದಿಂದ ಪ್ರೋತ್ಸಾಹಗೊಳ್ಳಬಹುದೆಂದು ನಂಬುತ್ತೇವೆ.

—ಸಂ

---

ಬದುಕಿನ ಕಷ್ಟಕೋಟಲೆಗಳನ್ನು ಸಹಿಸುತ್ತಾ ಬಾಳುವ ಮಾನವ ತನ್ನ ಸಾಧನೆಗಳ ಮೂಲಕ ಜೀವನಕ್ಕೆ ಅರ್ಥ ಕಂಡುಕೊಳ್ಳುತ್ತಾನೆ. ತನ್ನ ಕೃತಿಗಳ ಮೂಲಕ ಸಾಧನಗಳ ಮೂಲಕ ಮಾನ್ಯನಾಗುತ್ತಾನೆ. ಹೀಗೆ ಬಾಳಿ ಬದುಕಿದ ಕೆಲವೇ ಕೆಲವರು ಪ್ರಾತಃಸ್ಮರಣೀಯರಾಗುತ್ತಾರೆ. ಇಂತಹ ಚೇತನ ಒಂದರ ಪುಣ್ಯಸ್ಮರಣೆಯ ಕಾರ್ಯ ನನಗೆ ಒದಗಿ ಬಂದಿದೆ. ಮಹಾಭಾರತದಲ್ಲಿ ಯಕ್ಷ ಪ್ರಶ್ನಿಸುತ್ತಾನೆ. ಧರ್ಮದ ಏಕೈಕ ಸಾಧನ ಯಾವುದು ? ಕೀರ್ತಿಯ ಏಕೈಕ ಸಾಧನ ಯಾವುದು ? ಸುಖದ ಏಕೈಕ ಸಾಧನ ಯಾವುದು ? ಯುಧಿಷ್ಠಿರ ಉತ್ತರಿಸುತ್ತಾನೆ : **ದಕ್ಷತೆಯೊಂದೇ ಧರ್ಮದ ಸಾಧನ ; ದಾನವೊಂದೇ ಕೀರ್ತಿಯ ಸಾಧನ ; ಸತ್ಯವೊಂದೇ ಸ್ವರ್ಗದ ಸಾಧನ ; ಶೀಲವೊಂದೇ ಸುಖದ ಸಾಧನ.** ಹೀಗೆ ದಕ್ಷತೆಯಿಂದ ಧರ್ಮ, ಶೀಲದಿಂದ ಸುಖ, ದಾನದಿಂದ ಕೀರ್ತಿಗಳಿಸಿದವರಾದ ಶ್ರೀ ಸಣ್ಣಯ್ಯ ಪಟೇಲ್ 2-8-1890ರಂದು ಜನಿಸಿದರು.

**ಪೂರ್ವ ವೃತ್ತಾಂತ** ಪುತ್ತೂರು : ತಾಲ್ಲೂಕು ಮಾಡಾವು ಗ್ರಾಮದಿಂದ ಸಂಪಾಜೆಗೆ ಬಂದು ನೆಲೆಸಿದರೆಂದು ಹೇಳಲಾಗುವ ನಂಜಯ್ಯ ಎಂಬುವರು ನಂಜನ ಮನೆಯ ಮೂಲ ಪುರುಷ. ಇವರ ಮಗನ ಹೆಸರೂ ಸಣ್ಣಯ್ಯ ಎಂದಾಗಿತ್ತು. ಅವರ ಮಗ ಬಚ್ಚಣ್ಣ. ಸೊಸೆ ಮುದ್ದಮ್ಮ [ದೇರಾಜ್ ಮನೆ] ಇವರ ಮಗನೇ ಸಣ್ಣಯ್ಯ. ಸಂಪಾಜೆಯಲ್ಲಿ ಒಬ್ಬ ಜಂಗಮನಿದ್ದು ಆತನ ಮರಣಾನಂತರ ಈ ಆಸ್ತಿ ಲಭಿಸಿತೆಂದು ಹೇಳಲ್ಪಡುತ್ತಿದೆಯಾದರೂ ಇದಕ್ಕೆ ಯಾವುದೇ ಪುರಾವೆಗಳಿಲ್ಲ. ಮನೆಯಿಂದ ಮೂರು ಗಜ ಉತ್ತರದಲ್ಲಿ ವೀರಭದ್ರನ ಕಲ್ಲು ಮತ್ತು ದಕ್ಷಿಣ ಭಾಗದಲ್ಲಿ ಮನೆಯ ಪಕ್ಕದಲ್ಲಿ ವೀರಭದ್ರನ ಗುಡಿ ಇದೆ. 1960ರ ತನಕ ಪ್ರತಿ ವರ್ಷ ಜಂಗಮರನ್ನು ಕರೆಸಿ ಪೂಜೆ ಮಾಡಿಸುತ್ತಿದ್ದರು. ಈ ವಿಚಾರಗಳು ಮೇಲಿನ ಹೇಳಿಕೆಗೆ ಪೂರಕವಾಗಿದೆ. ಹತ್ತನೇ ವಯಸ್ಸಿನಲ್ಲಿ ಪಿತೃವಿಯೋಗವಾಯಿತು.

**ಸಂಸಾರ :** ಸಣ್ಣಯ್ಯ ಪಟೇಲರು ಸಿಡ್ಬ್‌ಮನೆಯ ವೆಂಕಮ್ಮ ಕಡಂಬಡ್ಕ ಮನೆಯ ಶಂಕರಿ ಎಂಬ ಇಬ್ಬರನ್ನು ವಿವಾಹವಾಗಿದ್ದರು. ಈ ಎರಡು ಪತ್ನಿಯರಲ್ಲಿ ಗಂಡು ಮಕ್ಕಳಾಗದ ಕಾರಣ 13-12-1923ರಲ್ಲಿ ಮುರುಳ್ಯ ಅಪ್ಪಯ್ಯ ಗೌಡರ ಪುತ್ರಿ ಪೂವಮ್ಮನವರನ್ನು ವಿವಾಹವಾದರು. ವಿವಾಹದ ಇಪ್ಪತ್ತು ವರ್ಷಗಳ ನಂತರ [27-4-1942ರಲ್ಲಿ] ದೇವಿಪ್ರಸಾದ್ ಜನನವಾಯಿತು. ಪ್ರಥಮ ಪುತ್ರಿ ಲಕ್ಷ್ಮಿ ಕೆದಂಬಾಡಿ ಸೋಮಪ್ಪನವರನ್ನು ಮದುವೆಯಾಗಿ [16-3-28] ಹೆಣ್ಣು ಶಿಶು ಶ್ರೀಮತಿ ಸರೋಜಿನಿ ಕಾರ್ಲೆವಿಗೆ ಜನ್ಮವಿತ್ತು ತೀರಿಕೊಂಡರು. 22-4-1931ರಲ್ಲಿ ತೃತೀಯ ಪುತ್ರಿ ಯಶೋಧರನ್ನು ಅಂಬೆಕಲ್ಲು ಮುತ್ತಯ್ಯ ಗೌಡರಿಗೆ ಮತ್ತು 26-2-1951ರಲ್ಲಿ ಕೊನೆಯ ಮಗಳು ದೇವಕಿಯನ್ನು ಸುಳ್ಯದ ಬಾಲಕೃಷ್ಣನವರಿಗೆ ವಿವಾಹ ಮಾಡಿಕೊಟ್ಟರು.

**ವಿದ್ಯಾಭ್ಯಾಸ :** ಕೇವಲ ಒಂದು ವರ್ಷ ವಿದ್ಯಾಭ್ಯಾಸ ಮಾಡಿದ್ದರೂ ಸ್ವಪ್ರಯತ್ನದಿಂದ ಪಾಂಡಿತ್ಯವನ್ನು ಗಳಿಸಿಕೊಂಡವರು ಮಿತ್ರರಾಗಿದ್ದ ವಿಟ್ಲದ ಅರಸರು ಪತ್ರಿಕೆ ತರಿಸಿ ಓದಲು ಸೂಚಿಸಿದ್ದನ್ನು ನೆನೆಸಿಕೊಳ್ಳುತ್ತಿದ್ದರು. ಮಳೆಗಾಲದಲ್ಲಿ ಭಾರತ ವಾಚನ ಕಾರ್ಯಕ್ರಮ ಇಟ್ಟುಕೊಂಡು ಸ್ವತಃ ಕುಮಾರ ವ್ಯಾಸ ಭಾರತವನ್ನು ಸುಶ್ರಾವ್ಯವಾಗಿ ಓದುತ್ತಿದ್ದರು. ತನ್ನ 29ನೇಯ ವಯಸ್ಸಿನಲ್ಲಿ [22-4-1920ರಲ್ಲಿ] ಮನೆಯ ಗೃಹಪ್ರವೇಶವಾಯಿತು. ಇದರ ನೆಲ ಅಂತಸ್ತು 28 ಚದರಗಳು ಮಹಡಿ 8 ಚದರಗಳು. ಈ ಮನೆ ರಚಿತವಾದ ಸಮಯದಲ್ಲಿ ಸಂಪಾಜೆ ಮಡಿಕೇರಿಗಳ ನಡುವೆ ಶಾಲೆಗಳಿರಲಿಲ್ಲ. ಮೂರು

ತಲೆಮಾರಿನ ಹಿಂದಿನ ಅನೇಕರು ಈ ಮನೆಯಲ್ಲಿದ್ದು ವಿದ್ಯಾಭ್ಯಾಸ ಮಾಡಿದ್ದಾರೆ. ಉಪಾಧ್ಯಾಯರಿಗೂ ವಿದ್ಯಾರ್ಥಿಗಳಿಗೂ ಇದು ಉಚಿತ ವಿದ್ಯಾರ್ಥಿ ನಿಲಯವಾಗಿತ್ತು.

ವಾಹನಗಳೇ ವಿರಳವಾಗಿದ್ದಾಗ 1947ರಲ್ಲಿ ಇವರು ಕೊಂಡುಕೊಂಡ ಹೊಸ ಪ್ಲೈಮತ್ ಕಾರು ರೋಗಿಗಳ ಸಾಗಾಣಿಕೆಗೆ, ಮದುವೆಗಳಿಗೆ ಹಾಗೂ ಚುನಾವಣೆಗಳಿಗೆ ಉಚಿತ ಓಡಾಟ ಮಾಡುತ್ತಿತ್ತು.

**ಗ್ರಾಮದ ಅಭಿವೃದ್ಧಿಯಲ್ಲಿ :** ಪರಿಸರದ ಕನಿಷ್ಟ ಅವಶ್ಯಕತೆಗಳೇನು, ಗರಿಷ್ಟ ತೊಡಕುಗಳೇನು, ಜೀವನದ ಮಟ್ಟವನ್ನು ಸುಧಾರಿಸುವುದು ಹೇಗೆ ಎಂಬಿತ್ಯಾದಿ ವಿಚಾರದಲ್ಲಿ ಸಾಕಷ್ಟು ವಿವೇಚನೆ ನಡೆಸಿ ಯೋಜನಾ ಬದ್ಧರಾಗಿ ಕಾರ್ಯ ತತ್ಪರರಾದವರು. ಅಂತೆಯೇ ಶಾಲೆ ಆಸ್ಪತ್ರೆ, ಗೋ ಆಸ್ಪತ್ರೆಗಳು ನಿರ್ಮಾಣಗೊಂಡವು.

* 4–10–1945ರಲ್ಲಿ ತಮ್ಮದೇ ಖರ್ಚಿನಿಂದ ಸಹಕಾರಿ ಸಂಘಕ್ಕೆ ಕಟ್ಟಡ ನಿರ್ಮಿಸಿದರು.

* 31–3–1952ರಲ್ಲಿ ಪ್ರಾಥಮಿಕ ಶಾಲಾ ಕಟ್ಟಡ ನಿರ್ಮಿಸಲ್ಪಟ್ಟಿತು.

* 1955ರಲ್ಲಿ ಮಾಧ್ಯಮಿಕ ಶಾಲಾ ಕಟ್ಟಡ ತಲೆಯೆತ್ತಿತು.

* ಪೂರ್ತಿ ಹಣ ತಾವೇ ವ್ಯಯಿಸಿ ಗೋ ಆಸ್ಪತ್ರೆಯನ್ನು 7–4–1956ರಲ್ಲಿ ತೆರೆದರು.

* ಸಾಕಷ್ಟು ವಿಶಾಲವಾದ ಆಸ್ಪತ್ರೆ ಕಟ್ಟಡ 30–10–52ರಲ್ಲಿ ನಿರ್ಮಿತಗೊಂಡಿತು.

* ಹೆರಿಗೆ ಆಸ್ಪತ್ರೆ ಕಟ್ಟಡ 26–10–56ರಲ್ಲಿ ಉದ್ಘಾಟಿಸಲ್ಪಟ್ಟಿತು.

ಹೀಗೆ ಗ್ರಾಮದ ಅವಶ್ಯಕತೆಗಳನ್ನು ಪೂರೈಸಲು ಆಗಿನ ಕಾಲದಲ್ಲಿ ರೂ. 50,000ಕ್ಕೂ ಮಿಕ್ಕಿ ದಾನ ನೀಡಿದ ಉದಾರಿಗಳಿವರು. ದುರ್ಮಾರ್ಗದಿಂದ ಕಳೆದವರೂ ಅಲ್ಲ. ಕೂಡಿಸಿದವರೂ ಅಲ್ಲ. ಇದ್ದದ್ದನ್ನು ಸ್ವಂತ ಪರಿಶ್ರಮದಿಂದ ಚೆನ್ನಾಗಿ ರೂಢಿಸಿಕೊಂಡವರು. 1953 ರಲ್ಲಿ ಕೊಡಗು ಸರಕಾರ ಸಮಾಜ ಸೇವೆಗಾಗಿ ಇವರಿಗೆ ಪ್ರಶಸ್ತಿ ಪತ್ರ ಮತ್ತು ಸ್ವರ್ಣ ಪದಕ ನೀಡಿ ಗೌರವಿಸಿತು. ಕರ್ನಲ್ ದಯಾಸಿಂಗ್ ಒಡೆ ಇವರಿಗೆ ಈ ಪ್ರಶಸ್ತಿಗಳನ್ನು ವಿತರಿಸಿದರು.

**ಸಹಕಾರಿ ರಂಗದಲ್ಲಿ :** 1939ರಲ್ಲಿ ಮಲ್ಲೇಶ್ವರದ ಸಹಕಾರಿ ಸಂಘ, ದವಸ ಭಂಡಾರ ಇವುಗಳನ್ನು ಸ್ಥಾಪಿಸಿ ಸುಮಾರು 25 ವರ್ಷಗಳಷ್ಟು ಕಾಲ ಅಧ್ಯಕ್ಷರಾಗಿದ್ದರು. ಉತ್ತಮ ಸಾಲ ವಸೂಲಾತಿಗೆ ಜಿಲ್ಲೆಯ ಶ್ರೇಷ್ಠ ಸಹಕಾರಿ ಸಂಘವಾಗಿ ಪ್ರಶಸ್ತಿಗಳಿಸಿದ್ದರು.

**ಸಮಾಜ ಸುಧಾರಣೆ :** ವಿಚಕ್ಷಣೆ, ದೂರದೃಷ್ಟಿಗಳಿಂದ ಅವರ ಕೆಲಸಕ್ಕೆ ಯಾವಾಗಲೂ ಶೋಭೆ ಇರುತ್ತಿತ್ತು. ಬೇರೆ ಜಿಲ್ಲೆಯ ಒಕ್ಕಲಿಗರೊಡನೆ ಸಂಬಂಧ ಬೆಳಸುವಲ್ಲಿ ಉದಾರ ನೀತಿಯನ್ನು ಹೊಂದಿ ತಮ್ಮ ಮೊಮ್ಮಗಳು ಸರೋಜನಿಯವರನ್ನು ಹಾಸನ ಜಿಲ್ಲೆಯ ಎಲ್. ಟಿ. ಕಾಶ್ಲೆಯವರಿಗೆ ವಿವಾಹ ಮಾಡಿ ಕೊಟ್ಟಿದ್ದರು.

**ಗೌಡ ವಿದ್ಯಾ ಸಂಘ !** 1921ರಲ್ಲಿ ಗೌಡ ಸಂಘ ಸ್ಥಾಪಿಸಲ್ಪಟ್ಟಾಗ 30ರ ಹರೆಯದ ಸಣ್ಣಯ್ಯ ಪಟೇಲರು ಕಾರ್ಯದರ್ಶಿಯಾಗಿ ಜವಾಬ್ದಾರಿ ವಹಿಸಿಕೊಂಡರು. 1933 ರಿಂದ ನಿಧನರಾಗುವ ತನಕ ಅಧ್ಯಕ್ಷರಾಗಿದ್ದರು. ಇವರ ಅಧ್ಯಕ್ಷತೆಯಲ್ಲಿ ಪುತ್ತೂರು, ಸುಳ್ಯ, ಗುತ್ತಿಗಾರು, ಪಂಜಗಳಲ್ಲಿ ಹಾಸ್ಟೆಲ್ ನಿರ್ಮಾಣವಾಯಿತು. ಇವರ ಹೆಸರಿನಲ್ಲಿ ವಿದ್ಯಾರ್ಥಿ ವೇತನ ನಿಧಿ ಇಡಲಾಗಿದೆ. ಈ ವಿದ್ಯಾರ್ಥಿ ವೇತನದಿಂದ ಅನೇಕ ಬಡ ಪ್ರತಿಭಾವಂತರು ವಿದ್ಯಾರ್ಜನೆ ಮಾಡುವುದು ಸಾಧ್ಯವಾಗಿದೆ. ಸಂಘಕ್ಕಾಗಿ ಧನ ಸಂಗ್ರಹಣೆಗೆ ದಕ್ಷಿಣ ಕನ್ನಡದ ಹೆಚ್ಚಿನ ನಮ್ಮವರ ಮನೆಗಳಿಗೆ ನಡೆದಿದ್ದಾರೆ. ಅನಾರೋಗ್ಯದಲ್ಲಿದ್ದಾಗಲೂ ನಾಮ ನಿಮಿತ್ತವಾಗಿಯಾದರೂ ಅಧ್ಯಕ್ಷನಾಗಬೇಕೆಂದು ಉಪಾಧ್ಯಕ್ಷರಾಗಿದ್ದ ದಿವಂಗತ ದೇರಪ್ಪಜ್ಜನ ವೀರಪ್ಪಗೌಡರು ಒತ್ತಾಯಿಸಿ ಅಧ್ಯಕ್ಷರ ಕೆಲಸ ತಾನೇ ನಿರ್ವಹಿಸಲು ಸಿದ್ಧರಾದದ್ದು ಅವರಿಗೆ ಮತ್ತು ಸಮಾಜದ ಮುಖಂಡರಿಗೆ ಶ್ರೀಯುತ ಸಣ್ಣಯ್ಯ ಪಟೇಲರಲ್ಲಿದ್ದ ವಿಶ್ವಾಸವನ್ನು ತೋರಿಸುತ್ತದೆ. ಬಹುಶ ಇದು ಅವರ ಸೇವೆಗೆ ಗೌಡ ಸಮಾಜ ನೀಡಿದ ಚರಿತ್ರಾರ್ಹ ಸನ್ಮಾನ. 1985ರಲ್ಲಿ ಸುಳ್ಯದಲ್ಲಿ ನಡೆದ ಚಾರಿತ್ರಿಕ ಗೌಡ ಸಮ್ಮೇಳನದಲ್ಲಿ ಅವರಿಗೆ ಮರಣೋತ್ತರ ಪ್ರಶಸ್ತಿ ನೀಡಲಾಯಿತು.

ಜಾತಿಯ ಅಭ್ಯುದಯದಲ್ಲಿ ಅವರಿಗೆ ತೀವ್ರ ಆಸಕ್ತಿ ಇದ್ದರೂ ಅದಕ್ಕಾಗಿ ದುಡಿಯುತ್ತಿದ್ದರೂ ಅವರು ಎಂದೂ ಜಾತಿವಾದಿಯಾಗಿರಲಿಲ್ಲ ಎಂಬುದು ಗಮನಾರ್ಹ.

**ಹವ್ಯಾಸ :** ಜಿಂಕೆ, ಕಾಡುಕೋಣ, ಹುಲಿಗಳನ್ನು ಭೇಟೆಯಾಡಿದ್ದಾರೆ. ಆನೆಯನ್ನು ಕರ್ಪುವಿನಲ್ಲಿ ಬೀಳಿಸಿದ್ದು, ಹುಲಿಯನ್ನು ಬೋನಿನಲ್ಲಿ ಹಿಡಿದಿದ್ದು ಅವರ ಯೌವನದ ಸಾಹಸಗಳು. ಯುವಕನಾಗಿದ್ದಾಗ ಕೊಡಗಿನ ಪ್ರಸಿದ್ಧ ಕೆಸರಿನ ಓಟದಲ್ಲಿ ಅವರನ್ನು ಮೀರಿಸುವವರಿರಲಿಲ್ಲ, ಕೋಳಿಕಟ್ಟ ಮತ್ತು ಕಂಬಳ ಅವರನ್ನು ಆಕರ್ಷಿಸಲಿಲ್ಲ. ಯಕ್ಷಗಾನ ಪ್ರಿಯರಾಗಿದ್ದರು ಮತ್ತು ಬಯಲಾಟಗಳನ್ನು ಏರ್ಪಡಿಸಿದ್ದರು.

ಹೀಗೆ ಇವರ ಬಾಳದರ್ಶನವೂ, ಬಾಳ್ವೆಯ ನಿದರ್ಶನವೂ

[8ನೇ ಪುಟ ನೋಡಿ]

# ಸಾಮಾಜಿಕ, ರಾಜಕೀಯ ಮತ್ತು ಶಿಕ್ಷಣ ವಲಯಗಳಲ್ಲಿ ತನ್ನನ್ನು ತೊಡಗಿಸಿಕೊಂಡ ನಿಡ್ಯಮಲೆ ವಿ. ಪ್ರಕಾಶ್



ಭಾಗಮಂಡಲನಾಡು, ಭಾಗಮಂಡಲ ಪಟ್ಟಣದ ನಿಡ್ಯಮಲೆ ಕುಟುಂಬಕ್ಕೆ ಸೇರಿದವನಾಗಿದ್ದು ಇವರು ತನ್ನ ಪ್ರಾಥಮಿಕ ವಿದ್ಯಾಭ್ಯಾಸವನ್ನು ಭಾಗಮಂಡಲದಲ್ಲಿ ಮಾಡಿರುತ್ತಾರೆ. ಮುಂದೆ ಪದವಿ ಮತ್ತು ಕಾನೂನು ಪ ದ ವಿ ವಿದ್ಯಾಭ್ಯಾಸವನ್ನು ಮೈಸೂರು ನಗರದಲ್ಲಿ ಮಾಡಿದ್ದಾರೆ.

ಮೈಸೂರಿನಲ್ಲಿ ಕಾನೂನು ವಿದ್ಯಾರ್ಥಿಯಾಗಿದ್ದಾಗ, ವಿದ್ಯಾರ್ಥಿಗಳ ಸಂಘಟನೆಯಲ್ಲಿ ಹೆಚ್ಚಿನ ಶ್ರಮವಹಿಸಿ ದು ಡಿ ದು ಕಾನೂನು ಪದವಿಯನ್ನು ಮಾಡುತ್ತಿರುವಾಗ ಕಾಲೇಜಿನಲ್ಲಿ 'ವಿದ್ಯಾರ್ಥಿ ಸಂಘಟನೆಯ ನಾಯಕ'ನಾಗಿ ಆಯ್ಕೆಯಾಗಿದ್ದರು. ಆ ಸಂದರ್ಭದಲ್ಲಿ ವಿದ್ಯಾರ್ಥಿಗಳ ಕುಂದು ಕೊರತೆ ಮತ್ತು ಬೇಡಿಕೆಗಳ ಬಗ್ಗೆ ಶ್ರಮವಹಿಸಿ ದುಡಿದದ್ದು ಅಲ್ಲದೇ ಮೈಸೂರಿನ ಹಲವಾರು ವಿದ್ಯಾರ್ಥಿ ಸಂಘಟನೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು, ತನ್ನ ನಾಯಕತ್ವವನ್ನು ಎತ್ತಿಹಿಡಿದಿದ್ದಾರೆ. ಕಾನೂನು ವಿದ್ಯಾಭ್ಯಾಸವನ್ನು ಮುಂದುವರಿಸಿ, 1982ರಲ್ಲಿ ಕಾನೂನು ಪದವಿಯನ್ನು ಪಡೆದಿದ್ದಾರೆ.

ಕಾನೂನು ಪದವಿಯ ನಂತರ 'ತನ್ನ ವಕೀಲ ವೃತ್ತಿ'ಯನ್ನು ಮಡಿಕೇರಿ ನಗರದಲ್ಲಿ ಪ್ರಾರಂಭ ಮಾಡಿ, ಆ ಸಂದರ್ಭದಲ್ಲಿ ಇವರು ಅತಿ ಚಿಕ್ಕ ವಯಸ್ಸಿನ ವಕೀಲರು ಆಗಿದ್ದರು ಸಹ ತನ್ನ ಕಾರ್ಯಕ್ಷೇತ್ರವನ್ನು ರಾಜಕೀಯ ಮತ್ತು ಜನಾಂಗದ ಸಂಘಟನೆಗೆ ಸದಾ ಮೀಸಲಿರಿಸಿದ್ದರು.

ಭಾಗಮಂಡಲ ಪೇಟೆಯಲ್ಲಿ ಕಲ್ಯಾಣ ಮಂಟಪದ ಅವಶ್ಯಕತೆ ಇದ್ದುದರಿಂದ ಅಂದು ಇವರ ತಂದೆ ದಿವಂಗತ ನಿಡ್ಯಮಲೆ ವೆಂಕಟರಮಣನವರ ಒಪ್ಪಿಗೆ ಪಡೆದು ಅರ್ಧ ಎಕರೆ ಜಮೀನನ್ನು ಭಾಗಮಂಡಲನಾಡು ಗೌಡ ಸಮಾಜಕ್ಕೆ ಅತಿ ಕಡಿಮೆ ದರದಲ್ಲಿ ಕೊಡಿಸಿದ್ದಾರೆ. ಭಾಗಮಂಡಲನಾಡು ಗೌಡ ಸಮಾಜದ ಸ್ಥಾಪಕರು ಅಲ್ಲದೇ ಮಡಿಕೇರಿಯ ಕೊಡಗು ಗೌಡ ವಿದ್ಯಾ ಸಂಘದ ಕಾರ್ಯದರ್ಶಿಯಾಗಿ ಎರಡು ವರ್ಷಗಳ ಕಾಲ ಸೇವೆಯನ್ನು ಸಲ್ಲಿಸಿದ್ದಾರೆ.

ರಾಜಕೀಯವಾಗಿ ತಾಲ್ಲೂಕು ಮತ್ತು ಜಿಲ್ಲಾಮಟ್ಟದ ಕಾಂಗ್ರೆಸ್ ಪಕ್ಷದ ಪದಾಧಿಕಾರಿಯಾಗಿ ಕಾರ್ಯ ನಿರ್ವಹಿಸಿದ್ದಾರೆ. ಆ ಸಂದರ್ಭದಲ್ಲಿ ಮಡಿಕೇರಿ ತಾಲ್ಲೂಕು 'ಭೂ ಅಭಿವೃದ್ಧಿ ಬ್ಯಾಂಕಿನ' ಚುನಾವಣೆಯಲ್ಲಿ ಜಯಿಸಿ ಸದರಿ ಬ್ಯಾಂಕಿನ ನಿರ್ದೇಶಕನಾಗಿ, ಮೂರು ವರುಷಗಳ ಕಾಲ ಸೇವೆ ಸಲ್ಲಿಸಿದ್ದಾರೆ.

ನಂತರ ವಕೀಲ ವೃತ್ತಿಯನ್ನು ಬೆಂಗಳೂರು ನಗರದಲ್ಲಿ ಸುಮಾರು 13 ವರುಷಗಳ ಕಾಲದಿಂದ ಮುಂದುವರಿಸಿರುತ್ತಾರೆ. ಇಲ್ಲಿಯೂ ಸಹ ಇವರು ಕಾರ್ಯಕ್ಷೇತ್ರವನ್ನು ರಾಜಕೀಯ ಮತ್ತು ಸಾಮಾಜಿಕ [ಜನಾಂಗದ ಒಕ್ಕೂಟ] ಕ್ಷೇತ್ರಕ್ಕೆ ವಿಸ್ತರಿಸಿರುತ್ತಾರೆ. ಪ್ರಸ್ತುತ ಇವರು ಕೆ.ಪಿ.ಸಿ.ಸಿ [ಐ] ಕಾನೂನು ವಿಭಾಗದಲ್ಲಿ ಮುಖ್ಯ ಕಾರ್ಯದರ್ಶಿಯಾಗಿ ನೇಮಕವಾಗಿರುತ್ತಾರೆ.

ಅಲ್ಲದೆ ನಮ್ಮ ಜನಾಂಗದ ಸಮಾಜದಲ್ಲೂ ಸಹ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ.

ಪ್ರಸ್ತುತ ಇವರು ಕರ್ನಾಟಕ ರಾಜ್ಯ ಸಾರಿಗೆ ಸಂಸ್ಥೆಗೆ ಕಾನೂನು ಸಲಹೆಗಾರರಾಗಿರುತ್ತಾರೆ. ಇತ್ತೀಚೆಗೆ ಭಾರತ ಸರಕಾರದಿಂದ ಸಿ.ಬಿ.ಐ. ಸಂಸ್ಥೆಗೆ ಹೆಚ್ಚುವರಿ ವಕೀಲರಾಗಿ ನೇಮಕವಾಗಿದ್ದಾರೆ. ಪ್ರಾಯಶಃ ನಮ್ಮ ಜನಾಂಗದಲ್ಲಿ ಇವರೇ ಈ ನೇಮಕಾತಿಯಲ್ಲಿ ಮೊದಲಿಗರೆನ್ನಬಹುದು.

ಇವರ ಧರ್ಮಪತ್ನಿ ನಿರ್ಮಲ ಇವರು ಎಂ.ಎಸ್ಸಿ., ಎಂ.ಬಿ.ಎ. ಪದವಿಧರರಾಗಿರುತ್ತಾರೆ. ಇವರು ಬಿ.ಇ.ಎಲ್. ಸಂಸ್ಥೆಯಲ್ಲಿ ಮ್ಯಾನೇಜರ್ ಆಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರು ಅತಿ ಚಿಕ್ಕ ವಯಸ್ಸಿನ ಮ್ಯಾನೇಜರ್ ಎಂಬ ಪ್ರಶಂಸೆಯನ್ನು ಸಹ ಅವರ ಸಂಸ್ಥೆಯಿಂದ ಪಡೆದಿರುತ್ತಾರೆ. ಇವರಿಗೆ ಈ ಸಂಸ್ಥೆಯಲ್ಲಿ ಉನ್ನತ ಪದವಿಗೆ ಏರುವ ಅವಕಾಶ ಸಹ ಬಹಳಷ್ಟು ಇದೆ ಎನ್ನುತ್ತಾರೆ.

ಇವರಿಗೆ ಎರಡು ಗಂಡು ಮಕ್ಕಳು. ಪವನ್ ಮತ್ತು ಮದನ್. ಶ್ರೀಯುತರಿಗೆ ಉಜ್ವಲ ಭವಿಷ್ಯವನ್ನು ಜನಾಂಗದ ಪರವಾಗಿ ಕೊಡಗು ಸಂಗಾತಿ ಬಯಸುತ್ತದೆ.

○ ಪಟ್ಟಡ ಪ್ರಭಾಕರ

---

[7ನೇ ಪುಟದಿಂದ]

## ಸಂಪಾಜೆ ಸಣ್ಣಯ್ಯ ಪಟೇಲರು

ನಮ್ಮೆಲ್ಲರಿಗೂ ಆದರ್ಶದ, ಸ್ಫೂರ್ತಿಯ ವಿಚಾರವಾಗಿದೆ. ಅದರ ಸಾತ್ವಿಕ ಪ್ರೇರಣೆ ಸಮಾಜಕ್ಕೆ ಮಾರ್ಗದರ್ಶನವಾಗಿದೆ. ಗುಣ ಗೌರವ ಸಜ್ಜನ ಸಂಗ ನಲ್ವಾತು ಇವೆಲ್ಲ ಸಂಸಾರದ ಫಲ. ಇಂತಹ ಸಂಸ್ಕಾರದ ಮೂಲಕ ತನ್ನ ಸಾಧನೆಗಳನ್ನು ಸಿದ್ಧಿಸಿಕೊಂಡ ಶ್ರೀ ಸಣ್ಣಯ್ಯ ಪಟೇಲರ ಪುತ್ರ ದೇವಿಪ್ರಸಾದ್ ಮತ್ತು ಸಹೋದರಿಯರ ಕುಟುಂಬದವರೂ ಗೌ ಡ ಸಮಾಜದ ಅಭ್ಯುದಯ ಕಾಯದಲ್ಲಿ ಸಕ್ರಿಯರಾಗಿರುವುದು ಸಹಜವೇ ಆಗಿದೆ. ○

ಲೇಖನ : ಎಂ. ಬಿ. ಸದಾಶಿವ.

# ದಿ|| ನಿಡ್ಯಮಲೆ ಮುದ್ದಪ್ಪನವರ ಮಕ್ಕಳ ಸೂಕ್ಷ್ಮ ಪರಿಚಯ



ದಿ|| ಮುದ್ದಪ್ಪನವರ ಪ್ರಥಮ ಪುತ್ರ 'ಐವರ್‌ನಾಡಿನ' ದಿ|| ಬಾಲಕೃಷ್ಣನವರು. ಇವರು ಶಿವಮೊಗ್ಗೆಯ ಸಾಹುಕಾರ್ ಹೆಚ್. ಎಸ್. ಮಂಜಪ್ಪನವರ ಪುತ್ರಿ ಮೀರಾರವರನ್ನು ವಿವಾಹವಾಗಿ 13–5–1973ರಂದು ದೈವಾಧೀನರಾದರು.

ಮೊದಲನೇ ಪುತ್ರಿ ದಿ|| ಸರೋಜಿನಿಯವರನ್ನು ಮಡಿಕೇರಿಯ ಖ್ಯಾತ ವಕೀಲರಾಗಿದ್ದ ದಿ|| ತೋಟಂಬೈಲು ಚಂಗಪ್ಪನವರೊಂದಿಗೆ ವಿವಾಹವಾಯಿತು.

ಎರಡನೇ ಪುತ್ರ ದಿ|| ವಸಂತರವರು ಬಿ.ಎ.ಬಿ.ಎಲ್. ಪಧವೀಧರರಾಗಿ ತ್ರಿಪುರ ಮಹಾರಾಜರ ಸಂಬಂಧಿಯವರನ್ನು ವಿವಾಹವಾಗಿದ್ದರು. ಎರಡನೆಯ ಪುತ್ರಿ ಅನುಸೂಯರವರು ಯಂತ್ರೋಪಲೇಜಿಯಲ್ಲಿ ಎಂ.ಎ ಪದವಿಯನ್ನು ಗಳಿಸಿದರು. ಕೊಡಗಿನ ಗೌಡ ಮಹಿಳೆಯರಲ್ಲಿ ಪ್ರಪ್ರಥಮ ಸ್ನಾತಕೋತ್ತರ ಪದವೀಧರರಾಗಿದ್ದಾರೆ. ಇವರ ವಿವಾಹವು ಡಾ|| ತಿಮ್ಮೇಗೌಡರೊಡನೆ ನಡೆದು ಅವರು ಈಗ ಅಮೇರಿಕದಲ್ಲಿ ನೆಲೆಸಿದ್ದಾರೆ. ಅಲ್ಲಿ ಅವರು ಸಮಾಜಶಾಸ್ತ್ರದ ಕಾರ್ಯಕರ್ತೆಯಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಮೂರನೇ ಪುತ್ರಿ ಸುಶೀಲರವರು ಬಿ. ಎ. ಬಿ. ಎಲ್. ಪದವಿಯನ್ನು ಪಡೆದು ಮಡಿಕೇರಿಯಲ್ಲಿ ಪ್ರಥಮ ಮಹಿಳಾ ವಕೀಲರಾಗಿ ಸೇವೆ ಸಲ್ಲಿಸಿ ಈಗ ಅಮೇರಿಕದಲ್ಲಿ ನೆಲೆಸಿದ್ದಾರೆ.

ನಾಲ್ಕನೇ ಪುತ್ರಿ ಶ್ರೀಮತಿ ಸುಭದ್ರರವರು ಸ್ಕ್ವಾಡ್ರನ್ ಲೀಡರ್ ದಿ|| ಪೂಜಾರಿ ಪುಟ್ಟಯ್ಯನವರನ್ನು ವಿವಾಹವಾಗಿದ್ದು ಈಗ ಬೆಂಗಳೂರಿನಲ್ಲಿ ನೆಲೆಸಿ ಇವರು ಮಾನಸಿಕ ಅಸ್ವಸ್ಥತೆಯ ವಿದ್ಯಾರ್ಥಿಗಳಿಗೆ ಶಿಕ್ಷಣ ಕೊಡುವ ತಜ್ಞೆಯಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಐದನೇ ಪುತ್ರಿ ಶ್ರೀಮತಿ ಶಕುಂತಳಾರವರು ಎಂ. ಎ. ಪಧವೀಧರರಾಗಿ ಬೆಂಗಳೂರಿನ ಡಾ|| ಕೃಷ್ಣಮೂರ್ತಿಯವರನ್ನು ವಿವಾಹವಾಗಿ ಅಮೇರಿಕಾದಲ್ಲಿ ನೆಲೆಸಿದ್ದಾರೆ.

ಆರನೇ ಪುತ್ರಿ ಡಾ|| ಯಮುನಾರವರು ಇಂಗ್ಲೆಂಡಿನ ಶ್ರೀ ಸ್ಮಿನ್‌ರವರನ್ನು ವಿವಾಹವಾಗಿ ಇಂಗ್ಲೆಂಡಿನಲ್ಲಿ ನೆಲೆಸಿದ್ದಾರೆ.

ಏಳನೇ ಪುತ್ರಿ ಶ್ರೀಮತಿ ಪ್ರೇಮಲತಾರವರು ಚಿಕ್ಕಮಂಗಳೂರಿನ ವಕೀಲರಾದ ಶ್ರೀ ಜನಾರ್ಧನರವರನ್ನು ವಿವಾಹವಾಗಿ ಚಿಕ್ಕಮಂಗಳೂರಿನಲ್ಲಿ ನೆಲೆಸಿದ್ದಾರೆ.

ಎಂಟನೇ ಪುತ್ರಿ ಶ್ರೀಮತಿ ಸುನಿತಾರವರು ಪಂಜಾಬಿನ ಅರುಣ್ ಕಪೂರ್‌ರವರನ್ನು ವಿವಾಹವಾಗಿ ಅಮೇರಿಕಾದಲ್ಲಿ ನೆಲೆಸಿದ್ದಾರೆ.

ದಿ|| ಮುದ್ದಪ್ಪನವರು ದೈವಾದೀನರಾದ ನಂತರ ಅವರ ಎಲ್ಲಾ ಮಕ್ಕಳ ವಿದ್ಯಾಭ್ಯಾಸದ ಖರ್ಚುಗಳನ್ನು ಅವರ ಮಾವ ದಿ|| ಮಡತ್ತಿಲ ಬೆಳ್ಯಪ್ಪನವರು ನಿರ್ವಹಿಸಿ ಅವರು ಜೀವಿತವಾಗಿರುವವರೆಗೆ ಹೆಣ್ಣುಮಕ್ಕಳ ವಿವಾಹದ ಖರ್ಚನ್ನು ಸಹ ಮಾಡಿದ್ದಾರೆ. ಈ ರೀತಿಯಾಗಿ ತಂದೆ ತಾಯಿ ಕಳೆದುಕೊಂಡ ಮಕ್ಕಳಿಗೆ ತಮ್ಮ ಅಜ್ಜ ದಿ|| ಬೆಳ್ಯಪ್ಪನವರು ಅವರ ಬದುಕಿನ ದಾರಿಗೆ ಬೆಳಕು ತೋರಿಸಿದ ಮಹಾನ್ ವ್ಯಕ್ತಿಯಾಗಿದ್ದಾರೆ.

**ಮುದ್ದಪ್ಪನವರು ವಾಸವಾಗಿದ್ದ ದೇವಿ ಮಂದಿರದ ಚಾರಿತ್ರಿಕ ಹಿನ್ನೆಲೆ :** 1942ರಲ್ಲಿ ಸುಭಾಶ್ಚಂದ್ರ ಭೋಸ್‌ರವರು ಐ.ಎನ್.ಎ ಯಲ್ಲಿ ಕಮಾಂಡರ್ ಇನ್ ಚೀಫ್ ಆಗಿದ್ದಾಗ ಅವರ ಅಣ್ಣ ಶರಶ್ಚಂದ್ರ ಬೋಸ್‌ರವರು ದೇವಿ ಮಂದಿರದಲ್ಲಿ ಬಂಧಿಯಾಗಿ ಬ್ರಿಟಿಷ್ ಸರಕಾರದವರು ಇಟ್ಟ ವಿಷಯ ಸ್ವಾತಂತ್ರ್ಯ ಸಂಗ್ರಾಮದ ಚರಿತ್ರೆಯಲ್ಲಿ ಒಂದು ವಿಶೇಷ ಘಟನೆಯಾಗಿದೆ.

ಪಶ್ಚಿಮ ಘಟ್ಟದ ಅರೆಭಾಷಿಕ ಗೌಡ ಜನಾಂಗವು ಕೊಟ್ಟೆ–ಪಾಳೆ, ತುಳುವ ಎಂಬ ನಿಂದನೆಯ ತುಚ್ಛ ನುಡಿಗಳನ್ನು ಸಹಿಸ

# ನಿಡ್ಯಮಲೆ ರಾಮಪ್ಪನವರ ವಂಶವೃಕ್ಷ (ಕೇಸರಿವಂಶ)

ನಿಡ್ಯಮಲೆ ಸುಬ್ಬಯ್ಯ

ನಿಡ್ಯಮಲೆ ರಾಮಪ್ಪ [ಪಾರುಪತ್ತೆಗಾರ]

ಕಾಳಮ್ಮ, ಶಂಗಮ್ಮ

| ನಿಡ್ಯಮಲೆ ಬೆಳ್ಯಪ್ಪ, ಚಿನ್ನಮ್ಮ | ನಿಡ್ಯಮಲೆ ಮುದ್ದಪ್ಪ, ದೇವಮ್ಮ | ನಿಡ್ಯಮಲೆ ಸೋಮಣ್ಣ, ಅಮ್ಮಣಿ |
|---|---|---|
| ಸುಬ್ಬಯ್ಯ | ಬಾಲಕೃಷ್ಣ | ಸುಬ್ಬಯ್ಯ |
| ಸೀತಮ್ಮ | ಸರೋಜಿನಿ | ವಿಮಲ |
| ಶಿವಮ್ಮ | ಅನುಸೂಯ | ದಯಾನಂದ |
| ರಾಮಪ್ಪ | ವಸಂತ | ಗೌರಿ |
| ಸುಶೀಲ | ಸುಶೀಲ | ಉಮ |
| ರಾಧ | ಸುಭದ್ರ | ಪ್ರಭಾ |
| ಅನಂತ | ಶಕುಂತಲ | ಶೋಭ |
| ಸಾವಿತ್ರಿ | ಯಮುನಾ | ನಂದಕುಮಾರ |
| ಪುಷ್ಪಾವತಿ | ಪ್ರೇಮಲತಾ | ಚಂದ್ರಶೇಖರ್ |
| | ಸುನೀತ | ಶ್ಯಾಮಸುಂದರ್ |

ಲಾಗದೆ ತಮ್ಮ ಮಾತೃಭಾಷೆ ಅರೆಭಾಷೆಯನ್ನು ಬಳಸಲು ಹಿಂಜರಿಯುತ್ತಿದ್ದ ಕಾಲ ಒಂದಿತ್ತು. ಜಗತ್ತಿನಲ್ಲಿ ಧರ್ಮವು ನಶಿಸಿ ಅಧರ್ಮವು ಹೆಚ್ಚಾದಾಗ ವಿಷ್ಣುವೇ ದಶಾವತಾರವನ್ನೆತ್ತಿ ಬಂದು ಧರ್ಮವನ್ನು ಕಾಪಾಡುತ್ತಾನೆಂಬುದು ಪುರಾಣ ಪ್ರಸಿದ್ಧಿಯಾದ ರೀತಿಯಲ್ಲಿ ಅರೆಭಾಷಿಕ ಗೌಡಜನಾಂಗದ ಪಾಲಿಗೆ ಸೂರ್ಯನೋಪಾದಿಯಲ್ಲಿ ಜನ್ಮ ತಳೆದು ಬಂದ ಶ್ರೀ ಹರಿ ಗಣಾದಿಗಳೇ ಪೆರಾಜೆಯ ನಿಡ್ಯಮಲೆ ಮುದ್ದಪ್ಪನವರು ಮತ್ತು ಅವರ ಸಂಸಾರೊಂದಿಗರು. ಗೌಡ ಜನಾಂಗದಲ್ಲೇ ಏಕೈಕ ನ್ಯಾಯಾಧೀಶರಾಗಿ ಕೊಡಗಿನಲ್ಲಿ ಗೌಡಜನಾಂಗದ ಇರುವಿಕೆಯನ್ನು ಬ್ರಿಟಿಷ್ ಚಕ್ರಾಧಿಪತ್ಯಕ್ಕೂ ಸ್ಪಷ್ಟಗೊಳಿಸಿ ಇವರನ್ನು ವಿದ್ಯಾವಂತ ಜನಾಂಗವನ್ನಾಗಿ ಮಾರ್ಪಡಿಸಿ, ಸಮಾಜದಲ್ಲಿ ಕೀಳರಿಮೆಯಿಲ್ಲದೆ ನಮ್ಮತನ, ತನ್ನತನವನ್ನು ಹಿಡಿದೆತ್ತಿ ಮುನ್ನುಗ್ಗಿಸಿದ ವೀರ ಗೌಡ ಕೇಸರಿ ಎಂಬ ಹಿರಿಮೆಗೆ ಪಾತ್ರರಾದ ಶ್ರೀ ನಿಡ್ಯಮಲೆ ಮುದ್ದಪ್ಪ ಮತ್ತು ಅವರ ಕುಟುಂಬಸ್ತರ ರೋಚಕ ಜೀವನ ಚರಿತ್ರೆಯನ್ನು ಹಂತ ಹಂತವಾಗಿ ಸುಮಾರು 21 ಸಂಚಿಕೆಗಳಲ್ಲಿ ಅವರ ಜನ್ಮ ಶತಾಬ್ಧಿ ಆಚರಿಸುತ್ತಿದ್ದ ಈ ಸಂದರ್ಭದಲ್ಲಿ ಪ್ರಕಟಿಸಿದ್ದೇವೆ. ಈ ಧೀಮಂತ ನಾಯಕನ ಅಪೂರ್ವ ಚರಿತ್ರೆಯು ನಮ್ಮ ಜನಾಂಗದ ಮುಂಬರುವ ಯುವ ಪೀಳಿಗೆಗೆ ಮಾರ್ಗದರ್ಶನವಾಗಿರಬೇಕೆಂಬ ಉದ್ದೇಶದಿಂದ ಇಷ್ಟು ಸುದೀರ್ಘವಾಗಿ ನೀಡಿದ್ದೇವೆ. ಇವುಗಳನ್ನು ಒದಗಿಸಿಕೊಟ್ಟ ಅಂದಿನ ಅಧ್ಯಕ್ಷರಾದ ಪೂಜಾರಿ ಮೊಣ್ಣಪ್ಪ ಮತ್ತು ಕಾರ್ಯಕಾರಿ ಮಂಡಳಿ, ಕೊಡಗು ಮತ್ತು ದ. ಕನ್ನಡ ಜಿಲ್ಲಾ ಗೌಡ ಸಮಾಜ ಬೆಂಗಳೂರು, ಇವರಿಗೆ ಕೊಡಗು ಸಂಗಾತಿ ಸಮಸ್ತ ಅರೆಭಾಷಿಕರ ಪರವಾಗಿ ಚಿರಋಣಿಯಾಗಿದೆ ಮತ್ತು ಈ ನಿಟ್ಟಿನಲ್ಲಿ ಯುವ ಪೀಳಿಗೆಯು ನೂರಾರು ಇಂತಹ ಗೌಡ ಮರಿ ಕೇಸರಿಗಳನ್ನು ಹುಟ್ಟುಹಾಕಲೆಂಬುದಾಗಿಯೂ ಸಹ ಆಶಿಸುತ್ತದೆ. ○

" ಜೈ ಹತ್ತು ಕುಟುಂಬ ಹದಿನೆಂಟು ಗೋತ್ರದ ಕುಲ ಬಾಂಧವರೇ "

—ಮುಕ್ತಾಯ—

—ಸಂಪಾದಕಿ

## ಹಿತವಾಣಿ

ಕಷ್ಟದಲ್ಲಿದ್ದರೂ ಇತರರ ಎದೆ ಬಿರಿಯುವಂತೆ ಮಾತಾಡಬಾರದು : ಇತರರಿಗೆ ದ್ರೋಹವೆಸಗುವ ಬುದ್ಧಿ ಇರಬಾರದು.

—ಮನುಸ್ಮೃತಿ

# ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ ವತಿಯಿಂದ "ಕೈಲ್ ಪೊಳ್ದ್" ಆಚರಣೆ ಹಾಗೂ ನಿರೀಕ್ಷೆಗೂ ಮೀರಿದ ಜನಸ್ತೋಮ

ಮಡಿಕೇರಿಯ ಮ್ಯಾನ್ಸ್ ಕಾಂಪೌಂಡ್‌ನಲ್ಲಿ ಹಿಂದೆಂದೂ ಕಂಡು ಕೇಳರಿಯದ ಈ ಪರಿಯ ಕೈಲ್‌ಪೊಳ್ದ್ ಹಬ್ಬವನ್ನು ನಮ್ಮ ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯವರು ಏರ್ಪಾಡು ಮಾಡಿದ್ದು ಕೊಡಗಿನ ಹೆಚ್ಚು ಜನಾಂಗದವರಿಗೆ ಗೊತ್ತೇ ಇರಲಿಲ್ಲವೆಂದರೆ ತಪ್ಪಾಗಲಾರದು. ಪತ್ರಿಗಳನ್ನು ಓದಿದವರನ್ನು ಬಿಟ್ಟರೆ, ಹಳ್ಳಿಯ ಕೆಲವರಿಗೆ ಇದರ ಅರಿವೆ ಇರಲಿಲ್ಲ. ಈ ಹಬ್ಬದ ಆಚರಣೆಯ ಸುದ್ಧಿ ಹಳ್ಳಿ ಹಳ್ಳಿಗೂ ತಲುಪದಿದ್ದರೂ ಸಹ ಹೇಳಿ ಕೇಳಿ ಬಂದ ಜನಸ್ತೋಮವನ್ನು ಸುಧಾರಿಸುವುದು ಅಕಾಡೆಮಿಯವರಿಗೆ ಸ್ವಲ್ಪ ಕಷ್ಟವಾಗಿ ಪರಿಣಮಿಸಬೇಕಾಯಿತೆಂದು ಹೇಳಬಹುದಾಗಿದ್ದರೂ ನಿರೀಕ್ಷೆಗೂ ಮೀರಿ ಮೂರು ಸಾವಿರಕ್ಕೂ ಮಿಕ್ಕಿ ಜನಾಂಗದ ಬಂಧುಗಳು ಒಟ್ಟಾಗಿ ಸೇರಿ ಕೈಲ್‌ಪೊಳ್ದ್ ಆಚರಣೆ ಜನಾಂಗದ ಇತಿಹಾಸದಲ್ಲಿಯೇ ಇರಲಿಕ್ಕಿಲ್ಲ ಎಂಬುದು ಅತಿಶಯೋಕ್ತಿಯಲ್ಲ. ಅಲ್ಲದೆ ಇದು ಸಹ ಒಂದು ದಾಖಲೆಯೇ ಸರಿ. ಅಂದು ಸೇರಿದ್ದ ಜನರ ಉಲ್ಲಾಸಕ್ಕೆ ಪಾರವೇ ಇರಲಿಲ್ಲ. ಇದನ್ನೆಲ್ಲಾ ವ್ಯವಸ್ಥಿತವಾಗಿ ಅದರಲ್ಲೂ ಊಟದ ವ್ಯವಸ್ಥೆ ಮಾಡಿದ್ದು ಜನಾಂಗದ ಸರ್ವರಿಗೂ ತಲುಪುವಂತೆ ಎಚ್ಚರವಹಿಸಿದ್ದರು. ಈ ಆಚರಣೆಯ ಮಧ್ಯೆ ಪುರುಷರು, ವನಿತೆಯರು ಹಾಗೂ ಮಕ್ಕಳಾದಿಯಾಗಿ ಭಾಗವಹಿಸಿದ್ದು ಒಂದು ವಿಶೇಷವಾಗಿತ್ತು. ಇದೇ ಮೊದಲ ಬಾರಿಗೆ ಹಗ್ಗ ಜಗ್ಗಾಟ ದಿನವಿಡಿ ನಡೆದುದಲ್ಲದೆ, ಮಹಿಳೆಯರ ಹಗ್ಗ ಜಗ್ಗಾಟ ನೆರೆದಿದ್ದ ಪ್ರೇಕ್ಷಕರಿಗೆ ಮನೋರಂಜನೆ ನೀಡಿದವು.

ಪೇರಿಯನ ಜುಗುನ್ ಕಾರ್ಯಪ್ಪನವರಿಂದ ಕ್ರೀಡಾ ಜ್ಯೋತಿಯನ್ನು ಬೆಳಗಿಸಲಾಗಿ, ಮಡಿಕೇರಿಯ ಮುಖ್ಯ ಬೀದಿಗಳಲ್ಲಿ ಸಂಚರಿಸಿದ ಕ್ರೀಡಾ ಜ್ಯೋತಿ ಸುಮಾರು 10–20ಕ್ಕೆ ಮ್ಯಾನ್ಸ್‌ಕಾಂಪೌಂಡನ್ನು ಮರುಪ್ರವೇಶಿಸಿತು. ಇದರ ಜೊತೆಯಲ್ಲಿಯೇ ಸ್ಥಳೀಯ ಶಾಸಕರಾದ ದಂಬೆಕೋಡಿ ಮಾದಪ್ಪನವರು, ಜಿಲ್ಲಾ ಪಂಚಾಯಿತ್ತು ಉಪಾಧ್ಯಕ್ಷರಾದ ಶ್ರೀಮತಿ ಅಮೆಮನೆ ಕಮಲಾ ಗಣಪತಿರವರು ಹಾಗೂ ಪ್ರಜಾವೇದಿಕೆಯ ಅಧ್ಯಕ್ಷರಾದ ಸಂ ಪಾ ಜೆ ಯ ನಂಜಯ್ಯನ ಸಣ್ಣಯ್ಯ ದೇವಿಪ್ರಸಾದ್‌ರವರ ಆಗಮನವಾಯಿತಲ್ಲದೆ, ಜೊತೆಗೆ ಕ್ರೀಡಾ ಚಟುವಟಿಕೆಗಳು ಪ್ರಾರಂಭವಾದವು. ಮಧ್ಯಾಹ್ನ ಊಟದ ನಂತರ 3 ಗಂಟೆಗೆ ಸರಿಯಾಗಿ ಸಾಂಸ್ಕೃತಿಕ ಕಾರ್ಯಕ್ರಮ ಪ್ರಾರಂಭವಾಯಿತು. ಮೊದಲಿಗೆ ಬೆಂಗಳೂರಿನ ಅಮ್ಮಾಜೀರ ಪೊನ್ನಪ್ಪ ತಂಡದಿಂದ ನೃತ್ಯ ಕಾರ್ಯಕ್ರಮ–ಜ್ಯೋತಿಯ ಬೆಳಗೋಣ ಹಾಗೂ ಮನೆತನದ ಹೆಸರನ್ನಿಟ್ಟು ಹಾಡಿದ ಸುಗ್ಗಿ ಸುವ್ವಾಲಿ ಕುಣಿತದ ಹುತ್ತರಿ ನೆರೆಕಟ್ಟುವ ಜಾನಪದ ನೃತ್ಯ. ಇದು ಜನಾಂಗದ ಸಂಘಟನೆಗೆ ಪೂರಕವಾಗಿದ್ದು ಜನರ ಮನ ಗೆದ್ದಿತಲ್ಲದೆ, ಡೆನ್ನಾನೋ ಡೆನ್ನಾನೋ, ನಮ್ಮರ್ದ್ ಇದ್ ನಮ್ಮರ್ದ್ ಎಂಬ ಅರೆಭಾಷೆ ಹಾಡು ಜನಸ್ತೋಮವನ್ನು ಮೂಕ ಪ್ರೇಕ್ಷಕರಂತೆ ಮಾಡಿದವು. ಭಾಗಮಂಡಲದ ಕುದುಕುಳಿ ಇಂದಿರಾಭರತ್ ಮತ್ತು ಸೇವಂತಿ ಚಂದ್ರಶೇಖರ್‌ರವರಿಂದ 'ನಮ್ಮೂರ ಸಂಸ್ಕೃತಿ ನಾಮ್ಗಿರಕೂ' ಹಾಡಿಗೆ ಭಾಗಮಂಡಲದ ಮಿಲನ್ ತಂಡದಿಂದ ಮನ ಮೆಚ್ಚುವ ನೃತ್ಯ. ಬೆಟ್ಟಗೇರಿಯ ಲತಾ ತಂಡದಿಂದ ಅಂಬಲಾಲಿ ಅಂಬಲಾಲಿ ಎಂಬ ಹಾಡಿನ ನೃತ್ಯವು ಚೆನ್ನಾಗಿತ್ತಲ್ಲದೆ, ಕೆದಂಬಾಡಿ ಜಯಶ್ರೀ ತಂಡದಿಂದ ಹತ್ತೇರಿ ಹುತ್ತೇರಿ ಹಾಡು ಸರ್ವರ ಮನಗೆದ್ದಿತು. ಗುಡ್ಡೇರ ಮನೆ ನಾಣಯ್ಯನವರ ಹಾಡಿನ ಮೂಲಕ ಗೌಡ ಜನಾಂಗದ ಕಿರುಪರಿಚಯವಾಯಿತು. ಪೂಜಾರಿ ಮನೆ ಸುಮನ್ ರಮೇಶ್‌ರವರಿಂದ ಭರತನಾಟ್ಯ ನಡೆಯಿತು. ಈಗಾಗಲೇ ಜನ ಮನ ಗೆದ್ದಿರುವ ಐಕೊಳ ತಂಡದಿಂದ ಕೋಲಾಟ ಏರ್ಪಾಡಾಗಿದ್ದ್ಗೆ, ಯಾಲದಾಳು ಶಾಂತಿ ಶಿವಪ್ಪ ತಂಡದಿಂದ ನೃತ್ಯ ಮೂಡಿಬಂತು. ನಂತರದ ಕಾರ್ಯಕ್ರಮ ಕೊಂಪುಳಿರ ನೀರಜ್ ಗೋಪಾಲಕೃಷ್ಣರವರಿಂದ ಭರತನಾಟ್ಯ, ಭಾಗಮಂಡಲ ತಂಡದವರಿಂದ ಆ ಕಾಲ ಲಾಯಿಕ್ಕನೇ ಈ ಕಾಲ ಲಾಯಿಕ್ಕನೇ ನೃತ್ಯವಾದರೆ, ಕಟ್ಟೆಮನೆ ಸೋನಾರವರಿಂದ ಚೋಟಾಸೋನಾ ನೃತ್ಯ ಜನರಿಗೆ ಮನರಂಜನೆ ನೀಡಿತು, ಬೈರೋಳಿ ವಿಶ್ಮಾ ಮತ್ತು ಸುಶ್ಮಾರವರಿಂದ ನೃತ್ಯವಾದ ಹಾಗೆ ಸಿದ್ಧಾಪುರದ ಕುಕ್ಕುನೂರು ತಂಡದಿಂದ ನೃತ್ಯ ಮಾಡಲ್ಪಟ್ಟಿತು. ಪುಳಂಜನ ಸಂದೀಪ್ ಮುತ್ತಪ್ಪನವರಿಂದ ಕೀಬೋರ್ಡ್ ಸಂಗೀತ ನುಡಿ ಕೊನೆಯ ಕಾರ್ಯಕ್ರಮವಾಗಿ ಮನರಂಜಿಸಿತು.

ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮುಖ್ಯ ಪ್ರಬಂಧಕರಾದ ದಂಬೆಕೋಡಿ ಆನಂದರವರು, ಕೊಡಗು ಗೌಡ ಸಮಾಜದ ಅಧ್ಯಕ್ಷರಾದ ತೋಟಂಬೈಲು ನಾಣಯ್ಯರವರು, ಕೊಡಗು ಗೌಡ ವಿದ್ಯಾಸಂಘದ ಅಧ್ಯಕ್ಷರಾದ ಕುಯ್ಯಮುಡಿ ಪೂರ್ಣಯ್ಯರವರು, ಗೌಡ ಮಹಿಳಾ ಒಕ್ಕೂಟದ ಅಧ್ಯಕ್ಷಣಿಯಾದ ಚೀಯಂಡಿರ ರಾಧಮಾಧವ್‌ರವರು, ಮಡಿಕೇರಿಯ ಶಾಸಕರಾದ ದಂಬೆಕೋಡಿ ಮಾದಪ್ಪರವರು ಆಗಮಿಸಿದ್ದರು. ಅತಿಥಿಗಳ ಜೊತೆಗೂಡಿ

ವೇದಿಕೆಯಲ್ಲಿ ಆಸೀನರಾಗಿದ್ದ ಅಂತರಾಷ್ಟ್ರೀಯ ಹಾಗೂ ರಾಷ್ಟ್ರೀಯ ಮೂಕಾಭಿನಯ ಪ್ರಶಸ್ತಿ ವಿಜೇತ ಬೈತಡ್ಕ ಶಶಿಧರ, ರಾಷ್ಟ್ರೀಯ ಪ್ರಶಸ್ತಿ 'ಭಾರತ್ ಶ್ರೀ ಮತ್ತು ಭಾರತ್ ಗೌರವ್' ವಿಜೇತ ಕೊರಿಯಾರು ಅಪ್ಪಣ್ಣ ರವಿಕುಮಾರ್, ರಾಜ್ಯ ಶಿಕ್ಷಕ ಪ್ರಶಸ್ತಿ ವಿಜೇತ ತೊತ್ತಿಯನ ಮಂದಣ್ಣ, ಜಿಲ್ಲಾ ಶಿಕ್ಷಕಿ ಪ್ರಶಸ್ತಿ ವಿಜೇತರಾದ ಅಯ್ಯಂಡ್ರ ಪಾರ್ವತಿ, ಜಿಲ್ಲಾ ಯುವಜನ ಪ್ರಶಸ್ತಿ ವಿಜೇತರಾದ ಕೊಂಪುಳೀರ ಗಣೇಶ್ ಬೋಪಯ್ಯ, ಅತ್ತೆಡಿ ಕಲಾ ಮೇಷ್ಟ್ರನ ಶಿವರಾಂ, ಬೊಳ್ಳೂರು ಸನತ್‌ಕುಮಾರ್ ಸನ್ಮಾನಿಸಲ್ಪಟ್ಟರು. ಎಸ್. ಎಸ್. ದೇವಿಪ್ರಸಾದ್ 'ಕೈಲ್‌ಪೊಳ್ದ್' ಹಬ್ಬದ ಪೂರ್ವಾರ್ಧದಲ್ಲಿ ಹಾಜರಿದ್ದು ನಂತರ ಅನಿವಾರ್ಯ ಕಾರಣದಿಂದ ನಿರ್ಗಮಿಸಬೇಕಾಯಿತು. ವೇದಿಕೆಯಲ್ಲಿದ್ದ ಅತಿಥಿಗಳು ಮಾತನಾಡಿ ಜನಾಂಗದ ಸಂಘಟನೆ ಹಾಗೂ ಸಂಸ್ಕೃತಿಯ ಬಗ್ಗೆ ಅರಿವು ಮೂಡಿಸಿ ಮುಂದೆ ನಾವು ಹೇಗೆ ಸಂಘಟಿತರಾಗಬೇಕೆಂದು ಹಿತನುಡಿದರಲ್ಲದೆ, ಅತಿಥಿಗಳಿಂದ ಬಹುಮಾನ ವಿತರಣೆಯಾಯಿತು. ಅಕಾಡಮಿ ಅಧ್ಯಕ್ಷರಾದ ತುಂತಜ್ಜಿ ಗಣೇಶ್‌ರವರಿಂದ ಸ್ವಾಗತವಾದರೆ ಅಕಾಡಮಿ ಕಾರ್ಯದರ್ಶಿ ಕೋಡಿ ಚಂದ್ರಶೇಖರ್‌ರವರಿಂದ ವಂದನಾರ್ಪಣೆ ನೆರವೇರಿತು. ಈ ಕಾರ್ಯಕ್ರಮವನ್ನು ಸಾಹಿತಿ ಬಾರಿಯಂಡ ಜೋಯಪ್ಪನವರು ಹಾಗೂ ಕೊಡಗು ಗೌಡ ಅಕಾಡಮಿಯ ಉಪಾಧ್ಯಕ್ಷರು ಮತ್ತು ಗುಡ್ಡೆಮನೆ ಅಪ್ಪಯ್ಯಗೌಡರ ವಿಚಾರ ವೇದಿಕೆಯ ಸಂಚಾಲಕರು ಆದ ಗುಡ್ಡೆಮನೆ ರಮೇಶ್‌ರವರು ಮನಮೆಚ್ಚುವ ರೀತಿಯಲ್ಲಿ ವಿಶೇಷವಾಗಿ ಹಾಗೂ ಸ್ವಾರಸ್ಯಕರವಾಗಿ ನಿರೂಪಿಸಿ ನೆರೆದಿದ್ದ ಜನಾಂಗದ ಪ್ರಶಂಸೆಗೆ ಪಾತ್ರರಾದರು. ○

—ಸಂಗಾತಿ ವರದಿ

## ಉದ್ಯೋಗ ವಾರ್ತೆ :

## ಸೈನಿಕ ಶಾಲೆ ಪ್ರವೇಶಕ್ಕೆ ಅರ್ಜಿ ಆಹ್ವಾನ

ಬಿಜಾಪುರ ಸೈನಿಕ ಶಾಲೆಯಲ್ಲಿ 1999ನೇ ಸಾಲಿಗಾಗಿ ಪ್ರವೇಶ ಪರೀಕ್ಷೆ ಮೂಲಕ 6ನೇ ತರಗತಿಯ ಪ್ರವೇಶಕ್ಕಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಬಾಲಕರು ಜುಲೈ 2, 1988 ಹಾಗೂ ಜುಲೈ 1, 1989ರ ಅವಧಿಯಲ್ಲಿ ಜನಿಸಿದವರಾಗಿರಬೇಕು. ಅಭ್ಯರ್ಥಿಯು ಕರ್ನಾಟಕಕ್ಕೆ ಸೇರಿದವರಾಗಿರಬೇಕು. ಅಥವಾ ಕರ್ನಾಟಕದಲ್ಲಿ ಸೇವೆ ಸಲ್ಲಿಸುತ್ತಿರುವ ರಕ್ಷಣಾ ಸಿಬ್ಬಂದಿಯವರ ಕುಟುಂಬದವರಾಗಿರಬೇಕು.

ಪ್ರವೇಶ ಪರೀಕ್ಷೆಯು ದಿನಾಂಕ 21–2–1999ರಂದು ಬೆಂಗಳೂರು, ಬೆಳಗಾವಿ, ಬಿಜಾಪುರ, ಹಾ ಗೂ ಗುಲ್ಬರ್ಗಾ ಕೇಂದ್ರಗಳಲ್ಲಿ ನಡೆಯಲಿದೆ. ಪರೀಕ್ಷೆಯು ಗಣಿತ ಭಾಷಾಜ್ಞಾನ ಮತ್ತು ಬುದ್ಧಿಮಾಪನ ವಿಷಯವನ್ನು ಒಳಗೊಂಡಿರುತ್ತದೆ. ಕನ್ನಡ, ಇಂಗ್ಲಿಷ್ ಅಥವಾ ಮತ್ಯಾವುದೇ ಭಾಷೆಯಲ್ಲಿ ಉತ್ತರ ಬರೆಯಬಹುದಾಗಿದೆ. 1999ನೇ ಸಾಲಿಗೆ ಸುಮಾರು 75 ವಿದ್ಯಾರ್ಥಿಗಳನ್ನು 6ನೇ ವರ್ಗಕ್ಕೆ ಪ್ರವೇಶ ಮಾಡಿಕೊಳ್ಳಲಿದ್ದು, ಆಯ್ಕೆಯಲ್ಲಿ ಮೀಸಲಾತಿ ಸೌಲಭ್ಯವೂ ಇರುತ್ತದೆ.

ಅರ್ಜಿ ನಮೂನೆ ಮತ್ತು ಹೆಚ್ಚಿನ ವಿವರಗಳನ್ನು ಪ್ರಿನ್ಸಿಪಾಲ್, ಸೈನಿಕ ಶಾಲೆ, ಬಿಜಾಪುರ–586 102 ಮೂಲಕ ಸಂಪರ್ಕಿಸಿ ಪಡೆಯಬಹುದಾಗಿದೆ. ತುಂಬಿದ ಅರ್ಜಿಗಳನ್ನು ದಿನಾಂಕ 31–12–1998ರ ಒಳಗೆ ಮೇಲ್ಕಂಡ ವಿಳಾಸಕ್ಕೆ ಕಳುಹಿಸಲು ಕೋರಲಾಗಿದೆ.

## ಪ ರಿ ಸ ರ

ಪರಿಸರ... ಪರಿಸರ—ಪರಿಸರ
ಅಹಾ ! ಎಷ್ಟು ಸುಂದರ ವರ್ಣಸರ
ಉದ್ಭವಿಸಿದೆ ಸಮಸ್ಯೆಗಳು ತರತರ
ಇಲ್ಲವೆ ಇದಕ್ಕೆ ಪರಿಹಾರ ?

ಆಗಿದೆ ಪರಿಸರ ಜೀವನದ ಆಧಾರ
ಇದರಿಂದ ದೊರೆಯುವುದು ದಿನಂಪ್ರತಿ ಆಹಾರ
ಕಲುಷಿತಗೊಂಡು, ಮೊಳಗಿದೆ ಉಳಿವಿಕೆಯ ಹಾಹಾಕಾರ
ಓ ಮಾನವ, ಕೈಗೊಳ್ಳು ನೀ ಉಳಿಸುವ ನಿರ್ಧಾರ.

ಸ್ವಾರ್ಥವ ತ್ಯಜಿಸಿ ಮುಂದೆ ಬಾರಾ
ನೋಡು ನೀನು ನಿಸರ್ಗದ ನೀರಾ
ಕೆಡುತ್ತಲಿರುವುದು ಎಲ್ಲದರ ಸಾರ
ಇಲ್ಲವೆ ಇದಕ್ಕೆ ಮುಕ್ತಿಯ ದಾರ.

ಹಾಕಿದೆ ಹಲವಾರು ಯೋಜನೆಗಳ ಸರಕಾರ
ಪಾಲಿಸಿದರೆ ಆಗಬಹುದು ಹೆಸರು ಅಮರ
ಪರಿಸರ ದೇವತೆ ತೊಡುವಳು ಜಯದಹಾರ
ಆಗಬಹುದು ಜಗತ್ತು ಆನಂದ ಸಾಗರ.

○ ಎಡಿಕೇರಿ ಸುಗುಣ ಶೇಷಪ್ಪ ಬಿ.
ಬಲ್ಲಮಾವಟ್ಟಿ

**ಊರಿಗೊಂದು ಶಾಲೆ ಬೇಕು**
**ಗೌಡರ ಮನೆಗೊಂದು ಸಂಗಾತಿ ಬೇಕು**

## ಶಾಲೆಯೇ ದೇವಾಲಯ

ಶಾಲೆಯೇ ದೇವಾಲಯ. ಈ ದೇವಾಲಯದಲ್ಲಿ ಅಧ್ಯಾಪಕರೇ ಪೂಜಾರಿ ಹಾಗೂ ಮಕ್ಕಳೇ ಭಕ್ತರು. ಮಕ್ಕಳಿಗೆ ಓದಲು ಬರೆಯಲು ಬೇಕಾಗುವ ವಸ್ತುಗಳೇ ಪೂಜೆಗೆ ಬಳಸುವ ಸಾಮಾಗ್ರಿಗಳು. ಪರೀಕ್ಷೆಯ ಫಲಿತಾಂಶವೇ ಪ್ರಸಾದ

ಗುರುಗಳು ಹೇಳಿಕೊಟ್ಟ ಪಾಠ ಪ್ರವಚನಗಳನ್ನು ಅಪಾರ ಭಯ, ಭಕ್ತಿ, ಶ್ರದ್ಧೆಯಿಂದ ಕೇಳುತ್ತೇವೆ. ಏಕೆಂದರೆ ದೇವಸ್ಥಾನದಲ್ಲಿ ಪೂಜೆ ಮಾಡುವಾಗ ಭಕ್ತರು ಹೇಗೆ ಭಕ್ತಿಯಿಂದ ಕೇಳುತ್ತಾರೋ ಹಾಗೆಯೇ ನಾವು ಕೂಡ ಪಾಠಗಳನ್ನು ನಿಗಾ ಇಟ್ಟು ಕೇಳಬೇಕು.

ನಾವು ವಿದ್ಯೆಯಿಲ್ಲದವರಿಗೆ ಈ ರೀತಿ ಹೇಳುತ್ತೇವೆ.

'ವಿದ್ಯೆ ವಿಯಿನಂ ಪಶುಸಮಾನಂ' ಎಂದು.

ಉಪಾಧ್ಯಾಯರು ವಿದ್ಯಾರ್ಥಿಗಳಿಗೆ ವಿದ್ಯಾಧಾನ ಮಾಡಿ, ಮಕ್ಕಳಿಗೆ ನೀತಿ, ನಡತೆ, ಶಿಸ್ತು ಎಲ್ಲವನ್ನು ಹೇಳಿಕೊಡುತ್ತಾರೆ.

ಹಿಂದಿನ ಕಾಲದಲ್ಲಿ ಸ್ತ್ರೀಯರಿಗೆ ಹೆಚ್ಚು ವಿದ್ಯಾಭ್ಯಾಸ ದೊರಕುತ್ತಿರಲಿಲ್ಲ. ಪುರುಷರಿಗೆ ಮಾತ್ರ ಸಿಗುತ್ತಿತ್ತು. ಈಗಿನ ಕಾಲದಲ್ಲಿ 'ಸ್ತ್ರೀ ಪುರುಷ ಸಮಾನಂ' ಎಂಬ ಮಾತನ್ನು ನಾವು ಬಳಸಬೇಕಾಗಿದೆ.

ನಾವು ಶಾಲೆಯನ್ನು ದೇವಾಲಯಕ್ಕೆ ಹೋಲಿಸುತ್ತಾ ಹೇಳಿದ್ದೇವೆ.

ಈ ವಿದ್ಯೆ ಎಂಬ ಎರಡಕ್ಷರವು ಇಡೀ ನಮ್ಮ ಜೀವನವನ್ನು ಮುಂದುವರಿಸಿಕೊಡುತ್ತವೆ. ಯಾರಿಂದಲೂ ಕದಿಯಲಾಗದಂತಹ ಈ ಅಮೂಲ್ಯ ವಸ್ತುವೆಂದರೆ ವಿದ್ಯೆ.

○ **ಮಲ್ಲನ ತನುಜ ದೇವಯ್ಯ,**
**ಮಡಿಕೇರಿ.**

## ಕೊಡಗು ಸಂಗಾತಿ

ಸಾಗುತ್ತಿಹೆ ನೀ ನಾಡಪಥಕ್ಕೆ
ಸಾಧನೆಯ ಮೆಟ್ಟಿಲತ್ತ
ಕೀರ್ತಿಯ ಕಳಸ ಹೊತ್ತು
ಆರೆಭಾಷಿಕರಿಗೆ ನೀನಾದೆ ಸಂಗಾತಿ
ಸಾಧನೆಗೆ ನೀನಾದೆ ಸಂಗಾತಿ
ಸಾಗುತಿಹೆ ನೀ ಶ್ರೇಷ್ಠ ಬರಹಗಳನ್ನೊತ್ತಿ
ಪ್ರತಿಭೆಯರ ಪ್ರತಿಭೆಯನ್ನು ಹೊರಹಾಕಿ
ಮೆರೆದಿಹೆ ನೀ ಗಣ್ಯನೆಂದು
ಪಡೆಯುತಿರು ಹೆಸರು ಶ್ರೇಷ್ಠನೆಂದು
ಓ ನನ್ನ ಕೊಡಗು ಸಂಗಾತಿ.

○ **ಬಾರನ ಪೂರ್ಣಿಮ ಅಪ್ಪಾಜಿ, ಕಾಜೂರು.**

## ಭಾಗಮಂಡಲ ಹಾಗೂ ತಲಕಾವೇರಿಯಲ್ಲಿ ತೊರೆಯಿಸಿದ ಸಂಪ್ರದಾಯವನ್ನು ಕರೆಯಿಸಿದ ತೋಟಂಬೈಲು ಮಾದಪ್ಪ ನಾಣಯ್ಯ

ದಿನಾಂಕ 18–10–98 [ಕಾವೇರಿ ಸಂಕ್ರಮಣ] ಕೊಡಗಿನ ಜನಾಂಗದವರಿಗೆಲ್ಲಾ ಶುಭ ದಿನ. ಈ ಶುಭದಿನಕ್ಕೆ ಭಾಗಮಂಡಲದ ಭಗಂಡೇಶ್ವರ ಸ್ವಾಮಿಯ ಹಾಗೂ ಶ್ರೀ ತಾಯಿ ಕಾವೇರಿ ಮಾತೆಯ ಚರಿತ್ರೆಯೇ ಕಾರಣ. ಚರಿತ್ರೆಯಂತೆ ನಡೆದು ಬಂದ ಸಂಪ್ರದಾಯವನ್ನು ಕಳೆದ ವರ್ಷ ಕೊಡಗು ಜಿಲ್ಲಾ ಜಿಲ್ಲಾಧಿಕಾರಿಗಳನ್ನು ಕೆಲವರು ದಾರಿ ತಪ್ಪಿಸಿ ಸಂಪ್ರದಾಯವನ್ನು ತಕ್ಕರಿಂದ ಕಿತ್ತು ಜಿಲ್ಲಾಧಿಕಾರಿಗಳಿಗೆ ಹಸ್ತಾಂತರಿಸಿದ್ದರು. ಈ ರೀತಿಯ ಸಂಪ್ರದಾಯವನ್ನು ಮುರಿದು ಅವಿವೇಕಿಗಳ ಹಾಗೂ ಸಮಯ ಸಾಧಕರ ಮಾರ್ಗದರ್ಶನಕ್ಕೆ ತಲೆಬಾಗಿದ ಜಿಲ್ಲಾಧಿಕಾರಿಗಳ ವರ್ತನೆ ಬಗ್ಗೆ ರೊಚ್ಚಿಗೆದ್ದ ಗೌಡ ಜನಾಂಗದವರು ಜನಾಂಗದ ಪರವಾಗಿ ನಮ್ಮ ಕೊಡಗು ಗೌಡ ಸಮಾಜದ ಅಧ್ಯಕ್ಷರಾದ ತೋಟಂಬೈಲು ನಾಣಯ್ಯರವರು ಗೌಡ ಜನಾಂಗದ ಎಲ್ಲಾ ಸಂಘ ಸಂಸ್ಥೆಗಳ ನಾಯಕತ್ವವನ್ನು ವಹಿಸಿ ನಮ್ಮ ಸಂಪ್ರದಾಯಕ್ಕಾದ ಅನ್ಯಾಯವನ್ನು ಸರಿಪಡಿಸಲು ಹೋರಾಡಿ ಕೊನೆಗೂ ಜಯಶೀಲರಾಗಿದ್ದು ಹೆಮ್ಮೆ ಪಡುವ ವಿಷಯ. ನಮ್ಮ ಜನಾಂಗದ ಹಿರಿಯ ನಾಯಕರಾದ ಶ್ರೀ ತೋಟಂಬೈಲು ನಾಣಯ್ಯನವರಿಗೆ ಸಮಸ್ತ ಗೌಡ ಜನಾಂಗ ಅಭಾರಿಯಾಗಬೇಕಾದುದಲ್ಲದೆ, ಮುಂದೆ ಇವರ ಸಮಾಜ ಬಾಂಧವರ ಒಕ್ಕೂಟದ ಪುರೋಭಿವೃದ್ಧಿ ಹೋರಾಟಕ್ಕೆ ಬೆಂಬಲಿಸಬೇಕಾದ್ದು ನಮ್ಮ ನಿಮ್ಮೆಲ್ಲರ ಆದ್ಯ ಕರ್ತವ್ಯವಲ್ಲವೆ ? ●

**—ತಡಿಯಪ್ಪನ ಕುಮಾರಜಯ, ಮೈಸೂರು.**

## ನಗೆ ಹನಿ

ಏನಯ್ಯಾ, ಬೋರ್ಡ್ ಹೀಗೆ ಬರೆದಿದ್ದಿ
ನಾನು ಹೇಳಿದ್ದು ಏನು ?
'ಯಮುನ ಟ್ರಾವೆಲ್ಸ್'
'ನೀನು ಬರೆದಿರೋದು ?'
'ಯಮನ ಟ್ರಾವೆಲ್ಸ್ ?'

○ **ಯಾಲದಾಳು ಈ. ಚಂದ್ರಕಲಾ,**
**ಮಡಿಕೇರಿ.**

## ನಿಮ್ಮ ಪತ್ರಗಳು

## ಅಮ್ಮಾಜೀರ ಪೊನ್ನಪ್ಪನವರ ಕಾವೇರಿನಾಡಿನಲ್ಲಿ ಕೈಲ್ ಮುಹೂರ್ತ ಹಬ್ಬದ ಸಮಾರಂಭ

ಮಾನ್ಯರೇ,

ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲ ತಾಲೂಕಿನ ಕಾಡುಕರೇನ ಹಳ್ಳಿಯಲ್ಲಿ ಸೆಪ್ಟೆಂಬರ್ ತಿಂಗಳ ದಿನಾಂಕ 13ರಂದು ಕಾವೇರಿನಾಡು ವಿದ್ಯಾಸಂಘದ ವತಿಯಿಂದ ಕಾವೇರಿನಾಡು ಅಮ್ಮಾಜೀರ ಪೊನ್ನಪ್ಪರೆಂದೇ ಹೆಸರುವಾಸಿಯಾಗಿರುವ ಶ್ರೀಯುತರ ಕೊಡಗು ಕೈಲ್ ಮುಹೂರ್ತ ಹಬ್ಬದ ಆಚರಣೆಯೊಂದಿಗೆ ಇತರ ಸಾಂಸ್ಕೃತಿಕ ಕಾರ್ಯಕ್ರಮಗಳೂ ಒಂದು ವಿಶೇಷ ಸಂಘಟಿತ ಆಯೋಜನೆಯಾಗಿತ್ತು. ಸಮಾರಂಭಕ್ಕೆ ಸಂಸಾರ ಸಮೇತ ಆಹ್ವಾನಿತನಾಗಿ ಹೋಗಿದ್ದ ನನಗೆ ದಿನವಿಡೀ ಹಮ್ಮಿಕೊಳ್ಳಲಾಗಿದ್ದ ಸಾಂಸ್ಕೃತಿಕ ಕಾರ್ಯಕ್ರಮಗಳು ಸಂತೋಷವನ್ನುಂಟುಮಾಡಿದ್ದವು. ಆ ಎಲ್ಲಾ ಕಾರ್ಯಕ್ರಮಗಳನ್ನು ಕಣ್ಣು ತುಂಬ ನೋಡಿ ಆನಂದಿಸಿದ್ದಲ್ಲದೆ ಕೊಡಗಿನ ಕೈಲ್ ಮುಹೂರ್ತ ಹಬ್ಬದ ವಿಶೇಷ ಔತಣದ ರುಚಿಯನ್ನು ಸವಿಯಲು ಅನುಮಾಡಿಕೊಟ್ಟ ಶ್ರೀಮತಿ/ಶ್ರೀ ಅಮ್ಮಾಜಿರ ಪೊನ್ನಪ್ಪ ದಂಪತಿಗಳಿಗೆ ನನ್ನ ಹೃತ್ಪೂರ್ವಕ ವಂದನೆಗಳು.

ಕಾವೇರಿನಾಡನ್ನು ಕಟ್ಟಿದ ಈ ಧೈರ್ಯಶಾಲಿ ಧೀಮಂತ ಗಂಡುಗಲಿ ಹಾಗೂ ಸಾಧನೆಮೂರ್ತಿ ಶ್ರೀ ಪೊನ್ನಪ್ಪನವರ ಪ್ರಪ್ರಥಮ ಹೆಚ್ಚಿನ ಪರಿಚಯವನ್ನು ನಮ್ಮ ಜನಾಂಗಕ್ಕೆ ಮಾಡಿಸಿಕೊಟ್ಟ ಕೀರ್ತಿಯನ್ನು 'ಕೊಡಗು ಸಂಗಾತಿ' ತನ್ನದಾಗಿಸಿಕೊಂಡಿದೆ ಎಂಬ ವಿಚಾರವನ್ನು ಅಲ್ಲಗಳೆಯುವಂತಿಲ್ಲ. ತನ್ನ ಸ್ವಂತ ಶ್ರಮದಿಂದ ಶ್ರೀಯುತರು ರಚನೆ ಮಾಡಿದ ಧ್ವನಿಮುದ್ರಿತ ನೃತ್ಯರೂಪಕ ಹಾಡುಗಳ ಸಹಾಯದಿಂದ ಅವರಿಗಿರುವಷ್ಟೇ ತಾಳ್ಮೆ ಮತ್ತು ಸಾಧನೆಗಳನ್ನು ಸಾಧಿಸಲು ಹೊರಟಿರುವ ಅವರ ನೃತ್ಯ ತಂಡದವರು ಈಗಾಗಲೆ ನಾಲ್ಕಾರು ಕಡೆ ಹಾಡುಗಳನ್ನು ನೃತ್ಯರೂಪಕವಾಗಿ ಪ್ರದರ್ಶಿಸಿ, ಪ್ರಶಂಸೆಗೆ ಪಾತ್ರರಾಗಿರುತ್ತಾರೆ. ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಅಂಗವಾಗಿ ಮಡಿಕೇರಿ ಪುರಸಭೆಯ ಸಭಾಂಗಣದಲ್ಲಿ ಕನ್ನಡ ಸಂಸ್ಕೃತಿ ಇಲಾಖೆಯವರು ಏರ್ಪಡಿಸಿದ್ದ ಮೂರು ದಿನಗಳ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಗೌಡ ಕುಟುಂಬಗಳ ಮನೆ ಹೆಸರುಗಳನ್ನು ಎತ್ತಿ ಹಾಡಿ, 'ಹುತ್ರಿಕದಿರಿನ ನೆರೆಕಟ್ಟಲು ಬನ್ನಿ' ಎಂದು ಬರಮಾಡಿಸುವ ಧ್ವನಿಮುದ್ರಿತ ಹಾಡು ನಮ್ಮ ಜನಾಂಗಕ್ಕೆ ಹೆಮ್ಮೆ ತಂದಿದೆ. ಇಂತಹ ಸಾಧನೆಯನ್ನು ಈ ತನಕ ಯಾರೂ ಬಹುಷಃ ಮಾಡಿಲ್ಲ. ಅಂತು ಅವರ ಪರಿಚಯವಾದ ಇಷ್ಟೊಂದು ಅಲ್ಪ ಅವಧಿಯೊಳಗೆ ಅವರು ನಮ್ಮ ಜನಾಂಗದ ಮೇಲೆ ಅಪಾರ ಪ್ರೀತಿ ವಿಶ್ವಾಸ ಸಂಪಾದಿಸುವುದರೊಂದಿಗೆ ಆ ಧ್ವನಿಮುದ್ರಿತ ಹಾಡಿನ ಕ್ಯಾಸೆಟ್ಟನ್ನು ಹೊರತಂದಿರುವುದು ಬಹಳ ಹಿರಿಮೆಯದು. ಇಂತಹ ಸಾಧನೆ ಪುರುಷರು ಎಲ್ಲಾ ಜನಾಂಗಗಳಲ್ಲೂ ಹುಟ್ಟಬೇಕು ಎನ್ನುವುದು ನನ್ನ ಅಭಿಪ್ರಾಯ.

ಸೆ. 13ರ ಆ ಸಮಾರಂಭದ ವೇದಿಕೆಯಲ್ಲಿ ಉಪಸ್ಥಿತರಾಗಿದ್ದ ಅತಿಥಿಗಳಿಗೆ ವೇಳೆ ಅಭಾವದಿಂದಾಗಿ ದೀರ್ಘ ಭಾಷಣಕ್ಕೆ ಅವಕಾಶವಿರಲಿಲ್ಲ. ಕಾರಣ ಸಾಂಸ್ಕೃತಿಕ ಹಾಗೂ ಇತರ ಮನೋರಂಜನ ಕಾರ್ಯಕ್ರಮಗಳು ಸಾಲುಕಟ್ಟಿ ನಿಂತಿದ್ದವು. ಪ್ರತಿಯೊಬ್ಬ ಅತಿಥಿಗಳು ಶ್ರೀ ಪೊನ್ನಪ್ಪನವರನ್ನು ತಮ್ಮ ಭಾಷಣದಲ್ಲಿ ಶುಭ ಹಾರೈಕೆಗಳ ನುಡಿಯನ್ನು ನುಡಿದರೂ, ಶ್ರೀಯುತರು ಹೊತ್ತಿರುವ ಇನ್ನೂ ಅನೇಕ ಆಸೆ ಆಕಾಂಕ್ಷೆಗಳು ಅದರಲ್ಲೂ ಮುಖ್ಯವಾಗಿ ಸಂಘ, ಸಂಸ್ಥೆ, ವಸತಿ ನಿವೇಶನ ಹಂಚುವ ಅವರ ಯೋಜನೆಗಳಿಂದ ನಮ್ಮ ಸಮಾಜದವರಿಗಾಗುವ ಮುಂದಿನ ಪ್ರಯೋಜನಗಳು ಮತ್ತು ನಾವು ಯಾವ ರೀತಿ ಸಹಕರಿಸಬೇಕು, ಅದು ಮುಂದೆ ಅವರು ಕಟ್ಟುತ್ತಿರುವ ಕಾವೇರಿನಾಡಿಗೊಂದು ಅರ್ಥ ಕೊಡುವಂತೆ ಉತ್ತೇಜನ ನೀಡಿ ಅತಿಥಿಗಳ ಪೈಕಿ ಯಾರಾದರೊಬ್ಬರು ನುಡಿಯುತ್ತಿದ್ದರೆ ಹೆಚ್ಚಿನ ಮೆರಗು ಕಂಡಂತಾಗುತ್ತಿತ್ತೇನೋ.

ಸಹಕಾರಿ ಸಂಸ್ಥೆ, ವಿದ್ಯಾಸಂಸ್ಥೆ, ಇಂಗ್ಲೀಷ್ ಸ್ಕೂಲ್‌ಗಳನ್ನು ಪ್ರಾರಂಭಿಸುವುದರೊಂದಿಗೆ ಅಭಿಲಾಷೆ ಹೊಂದಿರುವ ಕೊಡಗಿನ ಗೌಡ ಜನಾಂಗದವರಿಗೆಲ್ಲಾ ನಿವೇಶನ ಹಂಚಿ ಕೊಡಗಿನ ಕಾವೇರಿ ಮಾತೆಯ ಹೆಸರಿನಲ್ಲಿ ನಾಡನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕಟ್ಟಲು ಟೊಂಟ ಕಟ್ಟಿ ನಿಂತಿರುವ ಶ್ರೀಮತಿ/ಶ್ರೀ ಅಮ್ಮಾಜೀರ ಪೊನ್ನಪ್ಪ ಮತ್ತು ಬಳಗದವರಿಗೆ ನಮ್ಮ ಕುಲದೇವರಾದ ಶ್ರೀ ವೆಂಕಟರಮಣ ಸ್ವಾಮಿಯು ಸರ್ವ ರೀತಿಯಲ್ಲಿ ಒಳ್ಳೆಯದನ್ನು ಮಾಡಲಿ ಎಂದು ಶುಭ ಹಾರೈಸುತ್ತೇನೆ. ○

—ಬೈತಡ್ಕ ಎ. ಬೆಳ್ಯಪ್ಪ, ಮಡಿಕೇರಿ.

## ಚಿರಾಯುವಾಗಲಿ

ಮಾನ್ಯರೇ,

ನಾನು ಸಂಗಾತಿ ಪ್ರಿಯ. ಈಗ ಸಮಯಕ್ಕೆ ಸರಿಯಾಗಿ ಪುಸ್ತಕ ಬರುತ್ತಲಿದೆ. ನಾನು ಸಂಗಾತಿ ಹುಟ್ಟಿದ ಪ್ರಾರಂಭದಲ್ಲಿಯೇ ಶುಭಾಷಯ ಕೋರಿ ಪತ್ರ ಬರೆದಿದ್ದೆ. ಆದರೆ ಪ್ರಕಟ

ಗೊಂಡಿರಲಿಲ್ಲ ಬೇಸರವಾಯಿತು. ಸಂಗಾತಿ ಮೇಲಲ್ಲ, ಸಂಪಾದಕರ ಮೇಲೆ. ಅಂತೂ ದಿನೇ ದಿನೇ ಅಭಿವೃದ್ಧಿ ಹೊಂದುತ್ತಿರುವ ಸಂಗಾತಿ ಚಿರಾಯುವಾಗಲೆಂದು ಹಾರೈಸುತ್ತೇನೆ. ಹಾಗೂ ಕೆಚ್ಚೆದೆಯಿಂದ ಧೃತಿಗೆಡದೆ ಸಂಗಾತಿಯನ್ನು ಬೆಳಕಿಗೆ ತಂದ ಸಂಪಾದಕರಿಗೂ ಆಶೀರ್ವಾದಗಳು.

○ ಕೆ. ಕೆ. ಗೋಪಾಲ

## ಪ್ರಥಮ ಬಾರಿಗೆ ಮಡಿಕೇರಿ ಆಕಾಶವಾಣಿಯಿಂದ ಗೌಡ ಮಹಿಳಾ ಒಕ್ಕೂಟದ ಕಾರ್ಯಕ್ರಮ

ಮಾನ್ಯರೇ,

ದಿನಾಂಕ 15-9-98ರ ಮಡಿಕೇರಿ ಆಕಾಶವಾಣಿ ಕೇಂದ್ರ, ಮಹಿಳಾ ಲೋಕ ಕಾರ್ಯಕ್ರಮ ವಿಭಾಗದಲ್ಲಿ ಕೊಡಗಿನ ಗೌಡ ಮಹಿಳಾ ಒಕ್ಕೂಟದ ವತಿಯಿಂದ ಮೂಡಿಬಂದ ಎಲ್ಲಾ ಕಾರ್ಯಕ್ರಮಗಳು ಅತ್ಯುತ್ತಮ ಮಟ್ಟದಿಂದ ಕೂಡಿತ್ತು.

ಕಾರ್ಯಕ್ರಮದ ಮೊದಲಲ್ಲಿ ನೀಡಿದ ಎರಡು ಹಾಡುಗಳು ರಸವತ್ತಾಗಿದ್ದರೆ ನಂತರದ ಬಾಲ ಶೋಷಣೆಯ ಮಾತುಕತೆ ರೂಪಕ, ಕಾನೂನು ಹೇಗೆ ಬಾಲಶೋಷಣೆ ತಪ್ಪೆಂದು ಮತ್ತೊಮ್ಮೆ ಸಮಾಜಕ್ಕೆ ಅರಿವು ನೀಡುವಂತಾಗಿತ್ತು. ಮೂರನೆಯ ಕಾರ್ಯಕ್ರಮವು ಕೊಡಗಿನಲ್ಲಿ ಅಕ್ಕಿರೊಟ್ಟಿ ಮಾಡುವುದರ ಮಾಹಿತಿಯನ್ನು ನೀಡುವಲ್ಲಿ ಕೇಳುಗರಿಗೆ ಹರ್ಷವನ್ನು ತಂದಿತು. ಅನಂತರದ ಹಾಡು ಕೂಡಾ ತುಂಬಾ ಚೆನ್ನಾಗಿ ಮೂಡಿ ಬಂದಿತ್ತು. ಕೊನೆಯದಾಗಿ ಮೂಡಿಬಂದ 300 ವರ್ಷ ಹಳೆಯದಾದ ವೆಂಕಟರಮಣ ದೇವರ ಹಾಡು ಎಲ್ಲರಲ್ಲೂ ಇನ್ನೂ ಭಕ್ತಿ ಹೆಚ್ಚಿಸುವಂತೆ ಎಲ್ಲರ ಮನ ಸೆಳೆಯಿತು. ಇಷ್ಟೊಂದು ಕಾರ್ಯಕ್ರಮವನ್ನು ಒದಗಿಸುವಾಗ ಗೌಡರ ಅರೆಭಾಷೆಯಲ್ಲಿ ಒಂದು ಚಿಕ್ಕ ಕಾರ್ಯಕ್ರಮವನ್ನು ನೆರವೇರಿಸಿದ್ದಿದ್ದರೆ ಕಾರ್ಯಕ್ರಮಕ್ಕೆ ಇನ್ನೂ ಮೆರಗು ದೊರೆಯುತ್ತಿತ್ತೇನೋ? ಈ ಸಂದರ್ಭದಲ್ಲಿ ಕಾರ್ಯಕ್ರಮದಲ್ಲಿ ಭಾಗವಹಿಸಿದ ಎಲ್ಲಾ ಗೌಡ ಮಹಿಳೆಯರಿಗೆ ಶುಭ ಹಾರೈಕೆಯನ್ನು ಹಾರೈಸುತ್ತಾ ಇನ್ನು ಮುಂದಕ್ಕೂ ಇಂತಹ ಕಾರ್ಯಕ್ರಮಗಳು ಆಗಿಂದಾಗ್ಗೆ ಮೂಡಿಬರಲೆಂದು ಗೌಡ ಮಹಿಳಾ ಒಕ್ಕೂಟದ ಪರವಾಗಿ ಹಾರೈಸುತ್ತೇನೆ.

○ ನಂಗಾರು ಕಮಲಾ ಉತ್ತಪ್ಪ,
ಮಡಿಕೇರಿ.

## ಬೆಂಗಳೂರಿನ ವಿಮಾನ ಕಾರ್ಖಾನೆಯಲ್ಲಿ ಕೈಲ್ ಮುಹೂರ್ತ ಹಬ್ಬದ ಆಚರಣೆ

ಮಾನ್ಯರೇ,

'ಕೊಡಗು ಗೌಡ ಮಿತ್ರಮಂಡಳಿ' ಹೆಚ್. ಎ. ಎಲ್. ಬೆಂಗಳೂರು ಇದರ ಆಶ್ರಯದಲ್ಲಿ 8ನೇ ವರ್ಷದ ಕೈಲ್ ಮುಹೂರ್ತ ಹಬ್ಬವನ್ನು ದಿನಾಂಕ 20-9-98ರಂದು ಶ್ರೀ ಕಡ್ಯದ ಗೋಪಾಲರವರ ಮನೆಯಲ್ಲಿ ಆಚರಿಸಲಾಯಿತು. ಮುಖ್ಯ ಅತಿಥಿಗಳಾಗಿ ಶ್ರೀಮತಿ ಮತ್ತು ಶ್ರೀ ಉಡುದೋಳಿರ ಸೋಮಪ್ಪ [Notary, Bangalore] ಇವರು ಆಗಮಿಸಿದ್ದರು. ಶ್ರೀ ಅಣ್ಣಚ್ಚೀರ ಮಾದಪ್ಪನವರು ಅಧ್ಯಕ್ಷತೆ ವಹಿಸಿದ್ದರು. ಓಡಿಯನ ದಯಾನಂದನವರು ನೆರೆದಿದ್ದವರನ್ನು ಸ್ವಾಗತಿಸಿದರು. ಕಾರ್ಯದರ್ಶಿ ಶ್ರೀ ಕಲ್ಲುಮುಟ್ಲು ಕುಶಾಲಪ್ಪನವರು ವಾರ್ಷಿಕ ವರದಿಯನ್ನು ಓದಿದರು. ಹೆಚ್.ಎ.ಎಲ್. ಕಾರ್ಖಾನೆಯ ಅರೆಭಾಷೆಯ ಜನಾಂಗದವರು ತಮ್ಮ ಕುಟುಂಬ ಸಮೇತರಾಗಿ ಆಗಮಿಸಿ ತಮ್ಮ ಕಷ್ಟ ಸುಖಗಳ ವಿಚಾರ ವಿನಿಮಯ ಮಾಡಿಕೊಂಡರು. ಮುಖ್ಯ ಅತಿಥಿಗಳು ತಮ್ಮ ಭಾಷಣದಲ್ಲಿ ಅರೆಭಾಷೆ ಮತ್ತು ಅದರ ಅಭಿವೃದ್ಧಿಯನ್ನು ನವದಂಪತಿಗಳು ತಮ್ಮಲ್ಲಿ ಮತ್ತು ತಮ್ಮ ಮಕ್ಕಳಲ್ಲಿ ಪ್ರತಿನಿತ್ಯ ಮಾತಾಡುವುದರ ಮೂಲಕ ಉನ್ನತ ಪಡಿಸುವಂತೆ ಸಲಹೆ ನೀಡಿದರು. ಸಭೆಯನ್ನು ಉದ್ದೇಶಿಸಿ ಶ್ರೀ ಅಮೆಮನೆ ರವಿಪ್ರಕಾಶ್, ನಡುಮನೆ ಕರುಂಬಯ್ಯ, ಮೊಟ್ಟೇರ ಈರಪ್ಪ ಹಾಗೂ ಡಾ|| ರಘುರಾಂ ಮಾತನಾಡಿದರು.

ವಿಶೇಷ ಅತಿಥಿಗಳಾಗಿ ಆಗಮಿಸಿದ ಶ್ರೀ ಅಮ್ಮಾಜೀರ ಪೊನ್ನಪ್ಪ ಮತ್ತು ವೃಂದದವರ ಕೊಡಗು ಜಾನಪದ ಸಾಂಪ್ರದಾಯಿಕ ನೃತ್ಯ ಕಾರ್ಯಕ್ರಮವು ಸಮಾರಂಭಕ್ಕೆ ವಿಶೇಷ ಮೆರಗನ್ನು ನೀಡಿತು. ಕೊನೆಯದಾಗಿ ಶ್ರೀ ಕೋಟೆರ ಪೊನ್ನಪ್ಪನವರು ವಂದನಾರ್ಪಣೆಯನ್ನು ಮಾಡಿದರು.

## ಬಹಳ ಇಂಪಾಗಿದೆ

ಮಾನ್ಯರೇ,

ಶ್ರೀಮತಿ ಮತ್ತು ಶ್ರೀ ಅಮ್ಮಾಜೀರ ಪೊನ್ನಪ್ಪ ಹಾಗೂ ಹೊದ್ದೆಟ್ಟಿ ಭವಾನಿಶಂಕರ್‌ರವರಿಂದ ಅರೆಭಾಷಿಕ ಹಾಡಿನ ಚೊಚ್ಚಲ ಕಾಣಿಕೆ 'ಪೊನಿಧ್ವನಿ'ಯ ಧ್ವನಿಸುರುಳಿಯ ಹಾಡುಗಳು ಕೇಳಲು ಬಹಳ ಇಂಪಾಗಿವೆ. ಅದರಲ್ಲೂ ಸುಗ್ಗಿ ಸುಮ್ಮಾಲೆ ಕುಣಿತದ ಹಾಡು ಮುಂಬರುವ ಹುತ್ತರಿ ಹಬ್ಬವನ್ನು ಆಚರಿಸಲು ನಾಡಿನ ಸರ್ವ ಗೌಡ ಬಾಂಧವರನ್ನೇ ಕೈ ಬೀಸಿ ಕರೆದಂತಿದೆ. ಇಂಥಹ ಇಂಪಾದ ಅರೆಭಾಷಿಕ ನಾದಲಹರಿ ನಾಡಿನ ಉದ್ದಗಲಕ್ಕೂ ಅರೆಭಾಷಾಭಿಮಾನದ ಕಂಪನ್ನು ಹೊರಸೂಸುತ್ತಿರಲಿ ಎಂದು ಶುಭ ಹಾರೈಸುವ.

○ ಕುದುಪಜೆ ಸೀತಾ ಗಣಪತಿ, ಬೆಂಗಳೂರು.

**ಅರೆ ಭಾಷಿಕ ವಿಭಾಗ**

# ಕೈ ಕೊಟ್ಟ ಮೀಸೆ

ಮದುವೆ ಮನೆಗೆ ಹೋಕನ 'ಟ್ರಿಮ್ಮಾಗಿ' ಹೋಗದೆ ಇದ್ದರೆ ಕಂಡೊವು ಏನ್ ಹೇಳಿಕಿಲೆ? ನಮ್ಮ ಗಪ್ಪು ವಾರಕ್ಕೆ ಮುಂದೇ ಆ ಮದುವೆಗೆ ಹಂಗೆ ಹೋನೆ, ಹಿಂಗೆ ಹೋನೆಂತೆಲ್ಲಾ ಲೆಕ್ಕ ಹಾಕಿದೆ. ಹಾಳಾದ ಮಳೆ ಬೇರೆ. ಗಂಬೂಟು ಹಾಕುದಾ? ಥೂ ಜನ ಏನಾರ್ ಹೇಳುವೊ. ಲೆದರ್ ಬೂಟ್ ಹಾಕಣೆ. ಅಲ್ಲ, ಅದರ್ನ ಯಾರಾರ್ ಕದ್ದ್‌ಗಿದ್ದ್ ಬುಟ್ಟರೆ ಯಂತ ಮಾಡ್ದು? ಹ್ಞಾ! ಅದ್ಕೆ ಒಂದ್ ಉಪಾಯ ಉಟ್ಟ್. ಬೂಟ್ ಬಿಚ್ಚಿ ಒಂದರ ಈ ಕಡೆ ಬೇರೆ ಬೂಟ್‌ಗಳ ನಡುಲಿ ಇಸುದು. ಇನ್ನೊಂದರ ಆ ಕಡೆ ಬೂಟ್‌ಗಳ ನಡುಲಿ ಇಸುದು. ಹಿಂಗೆ ಇಸಿರೆ ಕದಿಯಂವ ತಲೆ ಕೆರ್ಕಂಬೊಕು. ಅದೆಲ್ಲಾ ಸರಿ, ಪ್ಯಾಂಟ್ ಯಾವುದ್ ಹಾಕಲಿ? ಜೀನ್ಸ್ ಪ್ಯಾಂಟ್ ಉಟ್ಟಲೆ. ಅಯ್ಯಯ್ಯೋ! ಆ ಪ್ಯಾಂಟೆಲ್ಲಾ ಸವುದ್ ಸವುದ್ ಮುಂಡಿಯೆಲ್ಲಾ ಬೆಳ್ಳಂಗಾವುಟು. ಇಲ್ಲಿ ಈಗ ಅದೊಂದ್ ಸ್ಟೈಲ್ ತಾನೆ?! ಗಪ್ಪುಗೆ ಚಾಂಪನ ಗ್ಯಾನ ಆತ್. ಒಂದ್ ಕಾಲಲಿ ಚಾಂಪ ಬಟ್ಟೆನೆಲ್ಲಾ ದಿಂಬುನಡಿ ಇಸಿ ತೊಡ್‌ಕನ ಅಡ್ಡಾದಿಡ್ಡಿ ಇಸ್ತ್ರಿ ಆದಂಗೆ ಕಾಂಬತ್ತಿತ್ತ್. ಆಗ ಚಾವೊನ್ನ 'ಮುದಿಸೊಕ್ಕು'ತ ಬಯ್ಯತಿತ್ತ್. ಅದ್ಕೆ ಚಾಂಪ ಸುಮ್ನೆ ಇತ್ತಿತ್ತ್‌ಲೆ ನೀನ್ ಏನ್‌ನೆ ಕಮ್ಮಿ, ಸೆಟ್ಟ್ ಹಲ್ಲ್ ಕಟ್ಟಿಸಿಕಂಡೊಳ. ನಿಂದ್ ಯಾವ ಮುದಿಸೊಕ್ಕುತ ತಿರ್ಗಿ ಹೆಳಿ ಕೊಕ್ಕೆ ಕೊಡೆ ಕುತ್ತಿಕಂಡ್ ಹೋತಿದ್ದರ ಗಪ್ಪು ಗ್ಯಾನ ಮಾಡ್‌ಕನ ನಾನೇನ್ ಕಮ್ಮಿತ ಮೀಸೆಗೆ ಎಣ್ಣೆ ಹಾಕಿ ಪೂಜಿಕಂಡತ್. ಮಿರಮಿರ ಮಿನುಗುವ ಹಂಗೆ ಮೀಸೆನ ಮಾಡಿಕಂಡ್ ಕನ್ನಡಿ ಮುಂದೆ ನಿತ್ತರೆ ಗಪ್ಪುಗೆ ಕರೆಂಟ್ ಹೋದೂ ಗೊತಾಕಿಲೆ.

ಮದುವೆ ಯಾಗ? ನಾಳೆ. ಓ! ಇಂದ್ ಚಪ್ಪರ. ಚಪ್ಪರ ದಿನನೇ ಹೋದರೆ ಹೆಂಗೆ? ಹಂಗೆಲ್ಲಾ ಹೋಕಾಗದ್. ಯಾಕೆಂತೇಳಿರೆ ಕಾಗದಲಿ 'ಒಂದೇ ದಿನದ ಸಮಾರಂಭಂತ' ಪ್ರಿಂಟ್ ಹಾಕಿದ ಮೇಲೆ ಕತ್ತಲೆಗೆ ಯಾಕೆ ಹೋಕು? ಅಯ್ಯೋ ಅದೆಲ್ಲಾ ಯಾರ್ ಕೇಳಿವೆ. ಕತ್ತಲೆ ಊಟಕ್ಕೆ ಜನ ಹೊಗೇ ಹೋದವೆ. ಅವು ಕರೇಲಿ, ಕರೇದಿರಲಿ ಹೋಗವು ಹೋಗೇ ಹೋದವೆ. ಅದು ತಪ್ಪು. ನಾ ಮಾತ್ರ ನಾಳೆ ಮೂರ್ತಕ್ಕೇ ಹೋದುತ ಗ್ಯಾನ ಮಾಡ್ದ ಗಪ್ಪು ನಾಳೆ ಅಲ್ಲಿ ಕಾಲಿಡಿವ್ರ ಕಾಲಿಡ್ಕನೆ, ಕೈಕುಲುಕುವರ ಕೈಕುಲ್ಕಿನೆ, ನಮಸ್ತೆ ಹೇಳವುಕೆ ನಮಸ್ತೆ ಹೇಳ್ನೆ, ಹಲೋ ಹೇಳವುಕೆ ಹಲೋಂತೇಳ್ನೆ, ಮುಖ ನೋಡಿ ನಗಾಡವು ಇರುವೊ, ಆಗ ನಗಾಡಿನೆ...

ಬೆಳಗಾತ್. ಹೈಕ್ಲಾಸಾಗಿ ಮೀಯೊಕುಂತೇಳಿ ಗುಡ್ಡಕೆ ಹೋತು. ಬಿಸಿ ನೀರ್ ಹುಯ್ಕಂಡತ್. ಗಮ್‌ಗಮಾ ಸಾಬೂನ್ ಹಾಕಂಡತ್. ಪದ ಹೇಳಿಕಂಡೇ ಮೀದೆಲ್ಲಾ ಆತ್. ಇನ್ನ್ ಗಡ್ಡ ಹೆರೆವ ಕೆಲ್ಸ. ಛೇ ಛೇ ಗಡ್ಡ ಹೆರ್ದ ಮೇಲೆ ಮೀಯೊದೊ? ಅಥ್ವ ಮೀದ ಮೇಲೆ ಗಡ್ಡ ಹೆರೆದೊ? ಗಪ್ಪು ಮೀದ ಮೇಲೆ ಗಡ್ಡ ಹೆರೆದು. ಯಾಕೆಂತೇಳ್ರೆ ಮೀದ ಮೇಲೆ ಕುದೋಲು ಬುಡ ಮೆತ್ತಂಗಾಗಿದ್ದದೆ. ಒಂದ್ ಬ್ಲೇಡ್‌ಲಿ ಹತ್ತ್ ಸರ್ತಿ ಶೇವ್ ಮಾಡಕ್. ಕೆಲವು ತಣ್ಣೀರ್‌ಲಿ ಮೊಕ ತೊಳ್ದ್ ಶೇವ್ ಮಾಡಿವೆ ಆಗ ಆ ಬ್ಲೇಡ್‌ದ್ ಬಾಳಿಕೆ ಒಂದೇ ಸತಿ. ಈ ವಿಚಾರ ಗೊತ್ತಿದ್ದ ಗಪ್ಪು ಮೀದ ಮೇಲೆ, ಒಂದ್ ಸಮಯ ಮೀಯದಿದ್ದರೆ ಬಿಸಿ ನೀರ್ಲಿ ಮೊಕ ತೊಳ್ದ್‌ಮೇಲೆ ಶೇವ್ ಮಾಡ್ತಾ ಇತ್ತ್. ಸರಿ, ಈಗ ಶೇವ್ ಮಾಡಿಕೆ ಶುರ್ ಮಾಡ್ದ ಗಪ್ಪು ಗಡ್ಡ ಕೆರ್ದ್ ಆದ ಮೇಲೆ ಮೀಸೆನ ಸೊಲ್ಪ ಲಾಯ್ಕ ಮಾಡಿನೆತ ಬ್ಲೇಡ್‌ಲಿ ಒಂದ್ ಕಡೆ ಕೆರ್ತ್. ಆಗ ಏನಾತ್? ಸೊಲ್ಪ ಜಾಸ್ತಿ ಕೆರ್ದೋತು. ಈ ಕಡೆ ಸರಿ ಮಾಡಿನೆತ ಈ ಕಡೆ ಕೆರ್ತ್. ಈ ಕಡೆನೂ ಸೊಲ್ಪ ಜಾಸ್ತಿ ಕೆರ್ದೋತ್. ಆಚೆ ಈಚೆ, ಈಚೆ ಆಚೆ ಕೆರ್ದ್ ಕೆರ್ದ್‌ಕನ ಮೂಗು ಕೆಳಗೆ ಕಪ್ಪು ಕಂಬ್ಳಿಹುಳ ಕುದ್ದಂಗೆ ತುಂಡಾಗಿ ಹೋತು. ಈ ರೀತಿ ತುಂಡಾದ ಮೀಸೆ ಇದ್ದರೆಷ್ಟ್, ಬುಟ್ಟ್‌ರೆಷ್ಟ್? ಈ ಮೀಸೆ ಬಾಯ್ಗೆ ಮಣ್ಣ್ ಹಾಕಿತ್‌ಂತೇಳಿಕಂಡ್ ಸಿಟ್ಟ್‌ಲಿ ಇಡೀ ಮೀಸೆನ ಕೆರ್ದ್‌ಕಿತ್. ಮೊಕ ಪೂರಾ ಬೋಳ್ ಬೋಳಾಗಿ ಹೋತ್. ಮದುವೆನೂ ಬೇಡ, ಯಂತನೂ ಬೇಡಾಂತ ತೀರ್ಮಾನ ಮಾಡ್ದ ಗಪ್ಪು ಕೊಟ್ಟ್ ತಕಂಡ್ ಸೀದ ಕಾಫಿ ತೋಟಕ್ಕೆ ಹೋತು. ಹೆಂಗೂ ಚರ್‌ಂಡಿ ತೆಗ್ಯೆದು ಬಾಕಿ ಇತ್ತಲ್ಲ, ಸಾಯಂಕಾಲ ಮುಟ್ಟ ಸಮಾ ತೋಟಲಿ ಗೈತ್. ○

—ಬಿ. ಆರ್. ಜೋಯಪ್ಪ,
ಮಡೆ.

---

## — ಹಾಸ್ಯ —

ಬೋಟಿ : ಎಲ್ಲಿಗೆರಾ ಹೋದ್ದ್?

ವಿನು : ಪಿಚ್ಚರ್‌ಗೆ

ಬೋಟಿ : ಹೌದಾ? ಹೆಂಗುಟ್ಟ್ Story?

ವಿನು : story ಏನೋ ಲಾಯಕುಟ್ಟ್. ಕತೇನೇ ಹಾಳ್ ಮಾಡಿ ಹಾಕುಟ್ಟ್ ಸುಟ್ಟಂವ

ಬೋಟಿ : ಸರಿ... ಪಿಚ್ಚರ್ Comedyನ tragedyನ?

ವಿನು : [ತಲೆ ಕೆರ್ಕಂಡ್] . ಹ್ಞಾ... ಎರ್ಡೂ ಅಲ್ಲ... ಮ್ಯಾಟನಿ.

○ ಎಡಿಕೇರಿ ಸುದರ್ಶನ್,
ಬೆಂಗಳೂರು.

# ಕುಞ್ಞಣನ ನಿರ್ಧಾರ

ಹೈತಾರೆ ಹೂಡಿ ಎತ್ತ್‌ಗಳ್ನ ಬುಟ್ಟ್ ಬಟ್ಟೆಗದ್ದೆ ಮೂಲೆಲಿ ಮೇಯ್ಸಿಕಂಡ್ ನಿತ್ತಿದ್ದೆ. ಪಿರಿಪಿರಿ ಮಳೆನೂ ಬರ್‍ತಾ ಇತ್ತ್. ಮೊಣ್ಕಾಲಿಗೆ ಮುಟ್ಟೆ ಗಂಬೂಟ್, ತಲೆ ಮ್ಯಾಲೊಂದು ಚೊಮ್ಕ ಹಾಕಂಡ್ ಆ ಮಳೆಲಿ ನೆನಿತಾ ಒಂದು ಜನ ಕೆಳ್ಗಿಂದ ಬರ್‍ತಾ ಇದ್ದೊ. ಮೊಟ್ಟೆ ಆಚೆ ಬೊದಿಲಿರೊ ಫಾರೆಸ್ಟ್‌ಗೆ ಹೋಗೊವು ಯಾರೋ ಇರೊಕು. ಯಾಕೆಂತೇಳ್ರೆ ಈಗೀಗಂತೂ ಅಲ್ಲಿ ಕದ್ದ್ ಮರ ಕೊಯ್ಸುವರ ಕಾಟ ಬಾಳಾ ಜಾಸ್ತಿ ಆಗುಟು. ಈ ಮಳೆಗಾಲಲಿ ಉಂಬುಳುಗಳಿಗೆ ಹೆದ್ರಿಕಂಡ್ ಬ್ಯಾರೆ ಯಾರೂ ಅತ್ತ ಹೋದೂ ಇಲ್ಲೆ. ಹಂಗಾಗಿ ಯಾರ ಹೆದ್ರಿಕೆನೂ ಇಲ್ಲದೆ ಅವು ತಮ್ಮ ಮನ್ಸ್‌ಗೆ ಬಂದ್ಹಂಗೆ ಮಾಡುವೆ. ಆದರೆ ಈಗ ಸಂಗತಿ ಏನಾಗುಟುಂತ್ಹೇಳ್ರೆ ಯಾರೋ ಮೂಗರ್ಜಿ ಬರ್‍ದ್ ಈ ವಿಷಯನ 'ಫಾರೆಸ್ಟ್ ಆಫೀಸ್‌ನವುಕೆ ತಿಳಿಸ್ಯೊಳೊ. ಈಗ ಒಂದು ಹದ್ನೈದ್ ದಿನಗಳ್‌ಂದಿತ್ತ ಆ ಕಡೆ ಫಾರೆಸ್ಟ್ ಗಾರ್ಡ್‌ಗಳ ಓಡಾಟ ಜಾಸ್ತಿ ಆಗುಟು. ಯಾರೋ ಗಾರ್ಡ್‌ಗಳೇ ಆಗಿರೊಕು ಅಲ್ಲಿ ಬರ್‍ತಾ ಇರ್‍ದ್ ಅಂತ ಗ್ಯಾನ ಮಾಡ್ದೆ.

ಈ ಮನ್ಸಂಗೆ ಸೊಯೆ ಉಟ್ಟಾ ಇಲ್ಲ್ಯಾ? ಈ ಮಳೆಗಾಲಲಿ ಕೈಲಿ ಕೊಡೆ ಇಲ್ಲದೆ ಅತ್ತ ಹೊರ್‍ಟ್ಟಟಲಾ! ಜೋರಾಗಿ ಮಳೆ ಹೊಡ್ಯಕೆ ಸುರಾದರೆ ಇಂವ ತಿರ್‍ಗಿ ಮನೆ ಸೇರ್‍ದ್ ಗ್ಯಾರಂಟಿ ಇಲ್ಲೆ ಕಂಡದೆ ಅಂತ ಮನ್ಸ್‌ಗೆ ಆತ್. ಬಂದವ ಹಾದಿಲೆ ನೆಟ್ಟಂಗೆ ಮ್ಯಾಲೆ ಹೋಗದೆ ಪುಣೆಲಿ ಅಡ್ಡ ತಿರ್‍ಗಿ ನನ್ನ ಕಡೆಗೆ ಬಾತ್. ಈ ಮಳೆಗಾಲ ಬಂದರೆ ಇಂತ ತಾಪತ್ರಯಗ ಮಾತ್ರ ನಮಿಗೆ ತಪ್ಪುದುಲೆ. ಕೆಲವು ಜನರ ಸ್ವಭಾವನೇ ಹಿಂಗೆ. ಮಳೆಗಾಲಲಿ ಕೈಲಿ ಕೊಡೆ ಇಲ್ಲದೆ ಹೊರಗೆ ಹೋಕಾಗದ್‌ಂತೇಳುವ ಗ್ಯಾನ ಇರ್‍ದುಲೆ. ಮನೆಂದ ಹೊರ್‍ಡುವ ಹೊತ್ತ್‌ಲಿ ಮಳೆ ಇಲ್ಲದಿದ್ದರೆ ನೆಟ್ಟಂಗೆ ಕೈ ಬೀಸಿಕಂಡ್ ಬಂದ್ ಬುಟ್ಟವೆ. ಹಾದಿ ನೊಡುಲಿ ಎಲ್ಲಾದರ್ ಮಳೆ ಸುರಾದರೆ ಓಡ್ಹೋಗಿ ಯಾರ್‍ನಾದರ್ ದಮ್ಮಯ್ಯ ಹಾಕಿ ಈಗಳೆ ತಂದ್ ಕೊಟ್ಟ್‌ಬುಟ್ನೆಂತೇಳಿ ಕೊಡೆ ಕೇಳಿಕಂಡ್ ಹೋದವೆ. ಹೋಗಿ ಮನೆ ಸೇರ್‍ದ ಮ್ಯಾಲೆ ಕೊಡೆನ ತಿರ್‍ಗಿ ಹಿಂದಕೆ ಕೊಡ್‌ಕೆ ಮರ್‍ತ್ ಹೋದೆ. ಹಿಂಗೆ ಉಪಕಾರಕೇಂತ ಕೊಟ್ಟ ಮೂರ್‍ನಾಲ್ಕ್ ಕೊಡೆನೆ ತಿರ್‍ಗಿ ವಾಪಸ್ ಬರದೆ, ಈಗ ಪ್ಯಾಟೆಗೆ ಹೋಕುಂತೇಳ್ರೂ ನಾವು ಗೊರ್‍ಗ್ ಹಾಕಂಡ್ ಹೋಗುವಂಗೆ ಆಗುಟು.

ಎಂತ ಮಹ್ರಾಯ ದೆವ್ವ ಹಿಡ್ದವರಂಗೆ ನಿತ್ತ್‌ಕಂಡ್ ನೋಡ್ತಾ ಒಳ ಅಲಾ! ಈ ಕೆಲ್ಸದ ಸಮಯಲಿ ನಾವುಗೆ ಪುರ್ಸೊತ್ತ್ ಇಲ್ಲದಿರ್‍ಕಕನ ಇಂವೊಬ್ಬ ಬಾತ್ ಕೆಲ್ಸ ಹಾಳ್ ಮಾಡಿಕೆ ಅಂತ ಗ್ಯಾನ ಮಾಡಿಯಾ ಏನ್? ಅಂತೇಳಿ ಕೈಕೈಕೈ ಅಂತ ನೆಗಾಡಿಕೆ ಸುರು ಮಾಡ್ತ್. ಆ ನೆಗೆ ಕೇಳ್ಕಕನೇ ನಂಗೆ ಗೊತ್ತ್ ಅಂವ ಯಾರ್‌ಂತೇಳಿ. ಅಂವ ನನ್ನ ಹಳೇ ದೋಸ್ತಿ ಕುಞ್ಞಣ! ಸಣ್ಣತಿರ್‍ಲಿ ನಾವಿಬ್ಬರು ಬಾಳಾ ಜೋಡಿ. ಎಲ್ಲಿ ಹೋದರೂ ಒಬ್ಬರ್‍ನ ಬುಟ್ಟ್ ಒಬ್ಬ ಇರ್‍ತಿತ್ಲೆ. ಅಂವ ಮಿಲ್ಟ್ರಿಗೆ ಸೇರ್‍ದ ಮ್ಯಾಲೆ ದೂರ ಆದೊ. ವರ್ಷಕ್ಕೊಮ್ಮೆ ರಜಲಿ ಬಾಕನ ಮಾತ್ರ ಕಾಂಬೊತಿದ್ದೊ ಅಷ್ಟೇ. ಈಗೊಂದು ಐದಾರ್ ವರ್ಷಂದ ಅಂವ ಇತ್ತ ಬಂದೇ ಇತ್ಲೆ. ಈಗ ಇದ್ದಕಿದ್ದಂಗೆ ಅವನ ಕಂಡ್ ನಂಗೆ ಬಾಳಾ ಖುಷಿ ಆತ್. ಎತ್ತ್‌ಗಳ್ನ ಪುಣೆ ಕರೆಲಿ ಕಟ್ಟಿ ಹಾಕಿ ಕುಞ್ಞಣನೊಟ್ಟಿಗೆ ಮನೆಗೆ ಬಂದೆ.

ಬಿಸಿ ಬಿಸಿ ಕಾಫಿ ತಂದ್ ಮೊಡ್ಗ್‌ಕಾಕನ ನಿಂಗೆಲ್ಲ ಯಾಗ ಬುದ್ಧಿ ಬಂದದ್ಯೊ ಏನೋ ನಂಗೊಂದು ಗೊತ್ತಾಡ್ಲೆ. ಈ ಮಳೆಗಾಲಲಿ ಸಹ ನೀನ್ ಬೊರೀ ಕಾಫಿ ಕುಡ್ಕಂಡ್ ಬದ್ಕಿಯುಲ? ನೀ ಯೆಲ್ಲ ಒಂದು ಮನ್ಸನಾ? ಅಂತ ಪಿರಿ ಪಿರಿ ಸುರು ಮಾಡ್ತ್. ನಂಗೆ ಕುಡಿಯುವ ಅಭ್ಯಾಸ ಎಲ್ಲ ಇಲ್ಲೆ. ಹಂಗಾಗಿ ಇಂತವರ್‍ನ ಸುಧಾರ್‍ಸುವ ರೀತಿನೂ ಒಮ್ಮೆಗೆ ಗೊತ್ತಾದೂ ಇಲ್ಲೆ. ಕುಡಿಯುವ ಅಭ್ಯಾಸ ಇರುವ ಕೆಲವು ನೆಂಟ್ರ್ ಬಾಕಾಕನ ಅವುಕೆ ಕೊಡದಿದ್ದರೆ ಇನ್ನ್ ನನ್ನ ಬೊಯ್ಕಂಬೊವೊಂತೇಳಿ ಎಲ್ಲಿಗಾದ್ರ್ ಹೋಗಿ ತಕಂಡ್‌ಬಾದು ಇದ್ದದೆ. ಕಳ್ದವಾರ ನಮ್ಮ ಸ್ವಾದರ ಮಾವ ಬಂದಿರ್‍ಕಕನ ಅವುಕೆ ತಂದಿದ್ದ ಬತ್ತದ ಸರಾಯ ಹಣಿ ಒಳ್ದಿತ್ತ್. ಅದರ್‍ನ ಬೊಗ್ಗ್‌ಸಿ ಕುಞಣಂಗೆ ಕೊಟ್ಟೆ.

ಈಗ ನಮ್ಮ ಮಕ್ಕ ಏನಾದರ್ ಗಲಾಟೆ ಮಾಡ್ರೆ ನಮಿಗೆ ಎಷ್ಟ್ ಪಿಕಿರಿ ಆದೆಂತೇಳ್ರೆ ಅವರ್‍ನ ಹಿಡ್ದ್ ನಾಲ್ಕ್ ಬಾರ್‍ಸಿ ಬುಡ್ನೊಂತಾದೆ. ಆದರೆ ಅವಗ್ಹಂಗಿರ್‍ಕಕನ ನಾವು ಆಡ್ತಾ ಇದ್ದ ಆಟಗಳನ್ನೆಲ್ಲ ಈಗ ಗ್ಯಾನ ಮಾಡ್ರೆ ಒಂತರಾ ಆದೆ. ನಾನು ಕುಞಣನೂ ಸೇರಿಬುಟ್ರಂತೂ... ನಮಿಗೆ ಬಾಲ ಒಂದು ಇತ್ಲೆ ಅಷ್ಟೇ.. ಹಂಗೆ ಆಡ್ತಿದ್ದೊ.

ಶಾಲೆಗೆ ರಜ ಇರುವ ಸಮಯಲಿ ಎಲ್ಲ ಮನೆಲಿ ನಮ್ಮ ಗಲಾಟೆ ತಡ್ಯಕೆ ಬೊತ್ತದೆ ಎಲ್ಲಾದರ್ ದೂರ ಹೋಗಲಿಂತೇಳಿ ದನಗಳ್ನ ನೋಡಿಕಂಬೊಕೆ ಮೊಟ್ಟೆಗೆ ಕಳ್ಸಿಬುಡ್ತಿದ್ದೊ. ಆಗೆಲ್ಲ ನಮ್ಮ ಚೆಡ್ಡಿ ಜೋಬು ತುಂಬ ಕಲ್ಲ್, ಕೈಲೊಂದು ರಬ್ಬರ್ ಬಿಲ್ಲ್. ಇಂದ್ ಯಾರ್ ಜಾಸ್ತಿ ಹಕ್ಕಿ ಹೊಡಿಯದುಂತೇಳಿ ನಮಿಗಿಬ್ಬರ್‍ಗೆ ಪಂಥ.

ಮಳೆಗಾಲ ಬಂದರೆ ಹೂಡಿ ಬುಟ್ಟ ಎತ್ತ್‌ಗಳ್ನ ಗದ್ದೆಲಿ ನೋಡಿಕಂಬೊದು ನಮ್ಮ ಕೆಲ್ಸ. ಆಗೆಲ್ಲ ತೋಡುಲಿ ನಾವುಗೆ ಎಸುಂಡ್ ಬ್ಯಾಟೆ ಜೋರು. ಇದ್ದಾ...ಮಾಳಿಗಳಿಗೆಲ್ಲ ಕೈಹಾಕಿ ಎಸುಂಡ್‌ಗ ಎಷ್ಟ್ ಕಚ್ಚಿರೂ ಬುಡದೆ ಹಿಡ್ದ್

ಬುಡ್ತಿದ್ದೊ. ಒಂದಿನ ಎಸಂಡ್ ಮಾಳಿಗೆ ಕೈ ಹಾಕಂಡಿರ್‍ಕಕನ ಅಪ್ಪ ಕೋಲು ತಕಂಡ್ ಬಂದ್ ಸಮಾ ಬಾರ್‍ಸಿದ್ದೊ. ಯಾಕೆಂತೇಳ್ಪ ನಾವುಗೆ ಮತ್ತೆ ಗೊತ್ತಾತ್. ನಾವುಗೆ ಬುದ್ಧಿ ಕಲ್ಸೊ ಕುಂತೇಳಿಯೋ ಏನೋ ನಾವು ನಮ್ಮ ಕೆಲ್ಸಲಿ ಮೈಮರ್ತದನ್ನ ಕಂಡ ಎತ್ತ್‌ಗ ನೆಟ್ಟಂಗೆ ಏರ್‌ಲ್‌ಗೆ ಹೋಗಿ ಸುಮಾರ್ ಆಗೆ ಕಾಲಿ ಮಾಡಿದ್ದೊ.

ಹಲ್‌ಸ್‌ನ ಹಣ್ಣ್ ಆಗುವ ಸಮಯಲಂತೂ ಯಾವ್ಯಾವ ಮರಲಿ ಎಷ್ಟೆಷ್ಟ್ ಕಾಯಿ ಉಟ್ಟ್. ಯಾವ ಕಾಯಿ ಯಾಗ ಹಣ್ಣಾದೆಂತೇಳುವ ಸಂಗತಿ ಎಲ್ಲ ನಾವುಗೆ ಮುಂದೇ ಗೊತ್ತಿರ್‍ತಿತ್ತ್. ಕುಞ್ಞಣ ಕೊರಿಯನ್ನಂಗೆ, ಎಂತಾ ಮರ ಆದರೂ ಹತ್ತಿ ಹಣ್ಣ್ ಕೆಡ್‌ಗ್ತಿತ್ತ್. ಮುಸುಂಡು ಮೈ ಕೈ ಎಲ್ಲ ಮಾಯಣ ಮೆತ್ತಿಕಂಡ್ ಆಗ ನಮ್ಮ ಅವಸ್ಥೆ ನೋಡ್ದು ಬ್ಯಾಡ!

ಶಾಲೆಂದ ಮನೆಗೆ ಬಾಕನ ಹಾದಿ ಕರೇಲಿದ್ದ ಭೀಮಯ್ಯ ಅಜ್ಜನ ತ್ಪಾಟಂದ ಹುಳಿ ಕದಿಯೋದು ನಮ್ಮ ಮಾಮೂಲಿ ಕೆಲ್ಸ. ಒಂದಿನ ಹುಳಿ ಮರದ ಕೊಡಿಲಿರುವ ಹೊತ್ತ್‌ಲಿ, ಯಾರ್‍ನೆ ಮಕ್ಕಳೆ ನಿಮ್ಮ ಚರ್ಮ ಸುಲ್ದ್‌ಬುಟ್ನೆಂತ ಅಜ್ಜ ಬಾಯಿ ಬೊಡ್ಕಂಡ್ ಬಂದೊ. ಅವು ಹೇಳ್ದಂಗೆ ಮಾಡೊವೇ. ಅಷ್ಟ್ ಸಿಟ್ಟ್ ಅವುಕೆ. ಅವರ ಸ್ವಭಾವ ನಾವುಗೆ ಮುಂದೇ ಗೊತ್ತಿದ್ದರ್‌ಂದ ಮುಳ್ಳ್ ಗಿಳ್ಳ್ ಒಂದೂ ನೋಡದೆ ಮರಂದ ಕೆಳ್ಗೆ ಹಾರಿ 'ಬದ್ಕಿರೆ ಬೇಡಿಯಾದ್ರ್ ತಿಂಬೊಂತೇಳಿ ಒಂದೇ ಓಟ. ಓಡಿ ಹೋಗಿ ಬೇಲಿ ಹಾರ್‍ಕಕನ ತಂತಿ ಹರ್ದ್ ಸುಮಾರ್ ಒಂದು ಗೇಣ್ ಉದ್ದ ಆದ ಗಾಯದ ಗುರ್ತ್ ಈಗಳೂ ನನ್ನ ತೊಡೆಲಿ ಹಂಗೇ ಉಟ್ಟ್.

ಹಿಂಗೆ ನಾವು ಪುಕ್ಕ ಆಗಿರ್‍ಕಕನ ಆಡ್ತಿದ್ದ ಆಟಗಳ್ನೆಲ್ಲ ಗ್ಯಾನ ಮಾಡಿಕಂಡ್ ಸುಮಾರ್ ಹೊತ್ತ್ ಪಟ್ಟಾಂಗ ಹೊಡ್ದೊ.

ಇನ್ನ್ ಎರ್‍ಡ್ ತಿಂಗಳ್ಲಿ ಮಿಲ್ಟ್ರಿ ಬುಟ್ಟ್ ಮನೆಗೆ ಬನ್ನೆಂತ ಕುಞ್ಞಣ ಹೇಳ್ತ್. ಹೌದಾ ! ಬಾಳಾ ವಳ್ಳೇದಾತ್. ಕೆಲ್ಸ ಬುಟ್ಟ್ ಬಂದ ಮ್ಯಾಲೆ ಇಲ್ಲಿ ಬ್ಯಾರೆ ಚಾಕ್ರಿ ಹಿಡಿಯೊದು ಮಿಲ್ಟ್ರಿಯವುಕೆ ಅಂತಾ ಕಷ್ಟ ಏನೂ ಅಲ್ಲ. ಅದೂ ಅಲ್ಲದೆ ನೀನ್ ಕರ್ನಲ್ ಆಗಿ ಇರಂವ. ಇಲ್ಲಿನೂ ನಿಂಗೆ ಯಾವ್ದಾದರ್ ವಳ್ಳೆ ಚಾಕ್ರಿನೇ ಸಿಕ್ಕುದುಂತ ಹೇಳ್ದೆ. ಛೇ...ಛೇ...ಹಂಗೆ ಬ್ಯಾರೆ ಚಾಕ್ರಿ ಮಾಡುವಂಗಿದ್ದರೆ ನಾನ್ ಬುಟ್ಟ್ ಬಾಕಿತ್ಲೆ. ಈಗನ ಚಾಕ್ರಿಲೇ ಇರ್‍ತಿದ್ದೆ. ಆದರೆ ನಂಗೆ ಹೊರಗೆ ಎಷ್ಟೇ ಗೆಯ್ದರೂ ಮನ್ಸ್‌ಗೆ ಸಮಾಧಾನಂತೇಳ್ದು ಇಲ್ಲೆ. ಹೆಂಗೂ ಮನೆಲಿ ಸೊಲ್ಪ ತ್ಪಾಟ ಗದ್ದೆ ಎಲ್ಲ ಉಟ್ಟಲ್ಲ ಅದರ್‍ನೆಲ್ಲ ಲಾಯಿಕ ರೂಢಿ ಮಾಡಿಕಂಡರೆ ಹೊಟ್ಟೆ ಪಾಡಿಗೆ ಬೇಕಾದಷ್ಟ್ ಉತ್ಪತ್ತಿ ಉಟ್ಟ್. ಜೊತೆಗೆ ಊರುಲೇ ಇದ್ದೊರ್‌ಂದ ಮನ್ಸ್‌ಗೆ ನೆಮ್ಮದಿನೂ ಇದ್ದದೆ. ಹಂಗಾಗಿ ಈ ನಿರ್ಧಾರ ಮಾಡ್ಯೊಳೆಂತೇಳ್ತ್. ಅಂವನ ಮಾತ್ ಕೇಳಿ ನಂಗೆ ಒಮ್ಮೆಗೇ ಆಶ್ಚರ್ಯನೂ ಖುಷಿನೂ ಆತ್ ಯಾಕೆಂತೇಳ್ರೆ ಈಗೀಗಂತೂ ಹಞ್ಞ ಕಲ್ತವು ಕಲಿಯದೊವು ಎಲ್ಲ ಹಳ್ಳಿ ಬುಟ್ಟ್ ಹೋಗಿ ಪ್ಯಾಟೆಲಿ ಬದ್ಕಿಕೆ ಆಸೆ ಮಾಡುವೆ. ಮನೇಲಿ ಆಸ್ತಿ ಪಾಸ್ತಿ ಇಲ್ಲದಿದ್ದರೆ ಹೋಗಲಿ ಬುಡಿ. ಅಲ್ಲಿ ಹೋಗಿ ಹೆಂಗಾದರ್ ಅವರ ಹೊಟ್ಟೆ ಪಾಡ್‌ಗೆ ಬೇಕಾದರ್‍ನ ಮಾಡಿಕಂಬೊವೊ. ಆದರೆ ಎಷ್ಟೋ ಜನ ಮನೆಲಿ ಬೇಕಾದಷ್ಟ್ ಆಸ್ತಿ ಇದ್ದರೂ ಅದರ್‍ನೆಲ್ಲ ಹಾಳ್ ಬೀಳ್ಸಿ ಪ್ಯಾಟೆ ಸೇರುವೆ. ಅಲ್ಲಿ ಸೆರಿಯಾದ ಕೆಲ್ಸನೂ ಇಲ್ಲದೆ, ಸಿಕ್ಕುವ ಕಮ್ಮಿ ಸಂಪಾದನೆಲಿ ಸೆರಿಯಾಗಿ ಬದ್ಕಿಕೂ ಆಗದೆ ಪರ್‍ದಾಡಿಕಂಡಿದ್ದವೆ. ಎಂತಾ ನಾಯಿ ಪಾಡ್ ಆದರೂ ಪ್ಯಾಟೆ ಬುಟ್ಟ್ ಮನೆಗೆ ಬರುವ ಮನ್ಸ್ ಅವುಕೆ ಬಾದುಲೆ. ಒಮ್ಮೆ ಪ್ಯಾಟೆ ಸೇರ್ದ ಮ್ಯಾಲೆ ತಿರ್‍ಗಿ ಊರಿಗೆ ಬಂದ್ ಇದ್ದರೆ ಜನ ನಮ್ಮ ಬಗ್ಗೆ ಆಡಿಕಂಬೊವೊಂತೇಳಿ ಅತ್ತಳೂ ಅಲ್ಲದೆ, ಇತ್ತಳೂ ಅಲ್ಲದೆ ಒಂಥರಾ ಎಡ್‌ಬಿಡಂಗಿ ಬದ್ಕ್ ಬದ್‌ಕ್ತಾ ಇದ್ದವೆ. ಇಂತ ಯಾವುದೇ ಕೀಳರಿಮೆ ಮನ್ಸ್‌ಲಿ ಇಟ್ಟ್‌ಕಣದೆ ಮನೆಲಿ ಇರುವ ಆಸ್ತಿನ ಲಾಯಿಕ ರೂಢಿ ಮಾಡಿಕಂಡಿದ್ದರೆ ದೊರೆಗಳಂಗೆ ಬದ್ಕಕ್. ಇಂತಹವರ್‍ನೆಲ್ಲ ನೋಡ್ತಾ ಇರುವ ನಂಗೆ ಕುಞ್ಞಣನ ಮಾತ್ ಕೇಳಿ ಅವನ ಬಗ್ಗೆ ಇದ್ದ ಪ್ರೀತಿ, ಗೌರವ ಎಲ್ಲ ಮತ್ತಷ್ಟ್ ಹೆಚ್ಚಾತ್. ಇಷ್ಟ್ ವರ್ಷ ಹೊರಗೆ ಹೋಗಿ ಗೆಯ್ದರೂ ಹಳ್ಳಿ ಬದ್ಕ್‌ಲಿ ಇರುವ ಸುಖ, ನೆಮ್ಮದಿನ ಅಂವ ಲಾಯಿಕ ಅರ್ಥ ಮಾಡಿಕಂಡುಟ್ಟ್. ದೇಶದ ಮೂಲೆ ಮೂಲೆಗಳಲಿ ಸುತ್ತಿ ಚಾಕ್ರಿ ಮಾಡ್ದ ಕುಞ್ಞಣನ ಅಭಿಪ್ರಾಯಲಿ, ವರ್ಷಕ್ಕೊಮ್ಮೆ ಎರ್‍ಡ್ ತಿಂಗ ರಜಲಿ ಬಂದ್ ಊರುಲಿ ಇರುವ ಹೊತ್ತ್‌ಲಿ ಅವಂಗೆ ಸಿಗ್ತಿದ್ದಂತ ನೆಮ್ಮದಿ ಬ್ಯಾರೆ ಎಲ್ಲೂ ಸಿಗ್ತಿತ್ಲೆ. ರಜ ಎಲ್ಲ ತೀರಿ ವಾಪಸ್ಸ್ ಹೊರ್‍ಡುವ ಸಮಯಲಿ ಅವಂಗೆ ಹೋಕೇ ಮನ್ಸ್ ಇರ್‍ತಿತ್ಲೆ. ಆಗೆಲ್ಲ ಬ್ಯಾಜರಲಿ ಅವನ ಮೊಕ ನೋಡಿಕೆ ಬೊತ್ತದಂಗಿರ್‍ತಿತ್ತ್, ಅಂತೂ ತೊಂದರೆಗಳಿಗೆ ಈಗ ಕೊನೆ ಆದಂಗೆ ಆತ್. ಚಾಕ್ರಿ ಬುಟ್ಟ್ ಬಂದ್ ಮನೆಲಿ ಗೆಯ್ದನೆಂತೇಳುವ ಸಂಗತಿ ಕೇಳಿ ನಂಗೆ ಆದ ಖುಷಿ ಅಷ್ಟಿಷ್ಟಲ್ಲ. ಆ ಖುಷಿಲೇ ಅವನ ಬಾಚಿ ತಬ್ಬಿಕಂಡ್ಬುಟ್ಟೆ.

○ ಚಾಂಗನ ಚಂ. ಪೂವಯ್ಯ, ಮಡಿಕೇರಿ.

---

## ಮ ಡಿ ಕೇ ರಿ

ಗಲ್ಲಿಗಲ್ಲಿಗೆ ಹಾಕ್ಸಿದೆ ಒಂದೊಂದೇ ನಲ್ಲಿ
ಪಾತ್ರೆಗಳ ಮೆರವಣಿಗೆ ಸುತ್ತುವರ್ದಟು ಇಲ್ಲಿ
ದಿನ ಇಡಿ ನೋಡಿರೆ ನೀರಿಲ್ಲೆ ಇದರ್ಲಿ
ವರ್ಷಇಡಿ ಇದೇ ಗೋಳು ಈ ಹಾಳ್ ಮಡಿಕೇರಿಲಿ.

○ ಟಿ. ಮಧು ತಮ್ಮಯ್ಯ, ಮೊಣ್ಣಂಗೇರಿ

## ಧಾರವಾಹಿ-15

ಮೂಲಕಥೆ : ಅಶ್ವಥಿ ಅರವಿಂದ್

ಅರೆಭಾಷೆಗೆ : ಎಂ.ಇ. ಮುಹಮ್ಮದ್

# ಕರಿ ಚಿನ್ನ

ಈಗಲಾದರೂ ನಿಮ್ಗೆ ನನ್ನ ಗೇನ ಬಾತಲ್ಲಾಂತ ಚಂಗುಮಣಿ ಕೇಳ್ತ್.

'ನಾನ್ ಈ ಕಡೆ ಬರ್ದೇ ಇದ್ರೂ ನಿನ್ನ ಅಪ್ಪಂಗೆ ಈಗ ಸೊಲ್ಪ ತಡಿ ಎಲ್ಲ ಬಂದುಟ್ಟು ಗೊತ್ತಾ ?'

'ನೀವು ಸಹಾಯ ಮಾಡ್ತಾ ಒಳರಿಂತ ತಂಗೆ ಕಾಗ್ದ ಬರ್ದುಟ್ಟು. ಹಂಗೆ ನಂಗೆ ಗೊತ್ತಾದ್ದ್. ನಂಗೆ ಯಾಗ ನೋಡ್ರೂ ಅವಳ್‌ದೇ ಚಿಂತೆ ಸಾರ್. ಅವಳಿಗೊಂದು ಮೊದ್ವೆ ಆದ್ರೆ ಸಾಕಿತ್ತ್ ಸಾರ್. ನೀವು ಸೊಲ್ಪ ಹಣ ಸಹಾಯ ಮಾಡೊಕು. ನಾನ್ ಬುಡ್‌ಗಡೆ ಆದ ಮೇಲೆ ಅದನ್ನ ಗೈದ್ ತೀರಿಸ್ನೆ.' ಚಂಗುಮಣಿ ಹೇಳ್ತ್.

'ಅದ್ರ ವಿಸ್ಯ ನಂಗೆ ಬುಟ್ಟ್‌ಬುಡು. ಆ ಏರ್ಪಾಡೆಲ್ಲ ನಾನ್ ಮಾಡ್ನೆ. ಆದ್ರೆ ಒಂದ್ ಸಂಗತಿ ಉಟ್ಟು. ನಾನೀಗ ನಿನ್ನ ಜಾಮೀನ್‌ಲಿ ಬುಡ್‌ಗಡೆ ಮಾಡ್ಸನೆ. ನಿನ್ನ ತಂಗೆನ ಮೊದ್ವೆ ಖರ್ಚಿಗೆ ಇಪ್ಪತ್ ಸಾವ್ರ ರುಪಾಯಿ ಕೂಡ ಕೊಟ್ನನೆ. ಆದ್ರೆ ನೀನ್ ನಂಗೆ ಒಂದ್ ಉಪಕಾರ ಮಾಡೊಕು.'

'ನಾನ್ ಎಂತ ಮಾಡೊಕು ದಣಿ ಹೇಳಿ ?'

ಚಂಗುಮಣಿ ಆತುರಲೇ ಕೇಳ್ತ್.

ದೇವಯ್ಯ ಚಂಗುಮಣಿಗೆ ಮೆಲ್ಲೆ ಹೇಳ್ತ್.

'ನಮ್ಮ ರಂಜು ಆ ನಾಡ್‌ಕೊಲ್ಲಿ ಮಾದಪ್ಪನ ಮಗಳ್ನ ಮೊದ್ವೆ ಮಾಡಿ ಕಣಿಕೆ ಹೊರಟುಟ್ಟು. ಡೌರಿಂತ ಹೇಳಿ ಒಂದ್ ನಯಾ ಪೈಸೆ ಸಿಕ್ಕುಲೆ. ಆ ಗೂಡೆ ಮಾಂಕ್ ಮಾರ್ಕ್ ಮಾಡಿ ಬಲಿಗೆ ಹಾಕುಟ್ಟು. ನೀನ್ ಬಂದ್ ಬುಟ್ಟ ಆ ಗೂಡೆ ಉಟ್ಟಲ್ಲ ಗೌರ ಅವಳ ಕತೆ ಮುಗ್ಸೊಕು. ದೊಡ್ಡ ಶಿಕ್ಷೆ ಸಿಗದ ಹಂಗೆ, ಒಳ್ಳೊಳ್ಳೆ ಜಾಗ-ಹೊತ್ತ್ ನೋಡಿ ಸಾಕ್ಷಿಗಳೆ ಇಲ್ದಂಗೆ ಈ ಕೆಲ್ಸ ಮುಗ್ಸೊಕು. ನೀನ್ ಬುಡ್‌ಗಡೆ ಆದ ದಿನ ಮೊದ್ಲ ಬಂದ್ ನನ್ನ ಕಾಣೊಕು. ನಾವಿಬ್ರು ಕೂಡಿಕಂಡ್ ದಿನ ಮತ್ತೆ ಸಮಯ ನಿಗದಿ ಮಾಡೊನು. ನೀನ್ ಅವಳ್ನ ಮುಗ್ಸೋ ದಿನ ನಾನ್ ಮುತ್ತಕ್ಕಿ ರಂಜನ್ ಮತ್ತೆ ನಮ್ಮ ಆಳ್ ಕುಟ್ಟನ ಕರ್ಕಂಡ್ ಮೈಸೂರಿಗೆ ಹೋನೆ. ಅದ್ಕೆ ಬೇಕಾದ ಕಾರಣನ ಹುಡ್ಕಿ ಇಟ್ಟನೆ. ಜೀವನ್ ಹೆಂಗಿದ್ರೂ ಕಾಲೇಜ್ ಹಾಸ್ಟೆಲ್‌ಲ್ಲಿದ್ದದೆ. ಗೌರ ಒಬ್ಬಳೇ ಮನೆಲಿ. ಅವಳು ನೋಡಿಕೂ ಬಾಳ ಪೊರ್ಲ್‌ನ ಗೂಡೆ. ನೀನಾದರೊ ಬಾಳ ಸಮಯ ಜೈಲೊಳಗೆ ಉಪಾಸ ಬಿದ್ದಂವ ಬೇರೆ. ಗಂಡಾಗಿರ್ ಕಾಕನ ಒಂದ್ ಆಸೆ ಇದ್ದೇ ಇದ್ದದ್ದಲ್ಲ. ಅವಳ ರಸ ನೋಡ್ದ ಮೇಲೆ ಚಾಕಾಕಿ ಕೊಂದ್ ಬುಡ್. ಅದ್ಕೆ ನಿಂಗೆ ದೊಡ್ಡ ಶಿಕ್ಷೆ ಏನೂ ಸಿಕ್ಕುಲೆ. ಜೈಲಿಂದ ಬುಡುಗಡೆ ಆದ ಗಂಡಿಗೆ ಅಪರೂಪ್‌ಲಿ ಕೈಗೆ ಸಿಕ್ಕುವ ಹಂಗೆ ಒಂದ್ ಗೂಡೆ ಸಿಕ್ಕ್‌ಕಾಕನ ಅವಳ್ನ ಒಮ್ಮೆ ಅನುಭವಿಸಿಕೆ ಗ್ಯಾನಾದ್ರಲ್ಲಿ ತಪ್ಪೇನೂ ಇಲ್ಲೆಂತ ನಮ್ಮ ಲಾಯರ್ ಆರ್ಗ್ಯುಮೆಂಟ್ ಮಾಡುವೆ. ಹಿಂಗಾಕನ ನಿನ್ನ ಕೋರ್ಟ್ ಸುಮ್ಮನೆ ಬುಡಕೂಸಾಕ್.'

ಬೋರ್‌ಗುಡ್ಡೆ ದೇವಯ್ಯ ಲಾಯ್ಕ ಚಂಗುಮಣಿನ ಕಿವಿಗೆ ಉರ್ಗಿತ್.

'ಹಿಂದೆ ಆ ವಿಜಿಲೆನ್ಸ್ ಆಫೀಸರ್‌ನ ಕೊಲ್ಲ್‌ಕಾಕನ ನೀವ್ ಹಿಂಗೇ ಐಡಿಯ ಹೇಳಿಕೊಟ್ಟೊಳ್ರಿ. ಆದ್ರೆ ನಂಗೆ ಸಿಕ್ಕಿದ್ ಹತ್ತ್ ವರ್ಷ ಜೈಲ್ ಶಿಕ್ಷೆ. ಜೈಲ್ ಪೊಲೀಸರ ಪೆಟ್ಟ್ ತಿಂದ್‌ಕಂಡ್ ನಾನಿಲ್ಲಿ ನರಕಯಾತನೆ ಪಡ್ತಾ ಒಳೆ. ನೀವ್‌ಗಾದರೋ ಯಾಗಳೂ ಹುತ್ರಿ. ಒಳ್ಳೇ ಸುಖ.'

ಚಂಗುಮಣಿ ಹೇಳ್ತ್.

ನೀನ್ ಸುಮ್ನೆ ಸುಳ್ಳ್ ಹೇಳ್ಬಡ ಮಾರಾಯ. ಜೈಲ್‌ಲಿ ಕಷ್ಟ ಇದ್ದಿದ್ರೆ ನಿಂಗೆ ಈ ಪಾಟ ತಡಿ ಬರ್ತಿತ್ತಾ ಹೇಳ್.

ಜೈಲ್‌ಲಿ ಇದ್ದ ಸುಖ ಹೊರಗೆ ಸಿಕ್ಕಿದ್ದಾ ಹೇಳ್ ? ಇನ್ನ್ ನಿಂಗೆ ಹತ್ತ್ ವರ್ಷ ಶಿಕ್ಷೆ ಸಿಕ್ಕಿದ ವಿಚಾರ-ವಿಜಿಲೆನ್ಸ್‌ನವೂ, ಜೆಡ್ಜೂ, ಪೊಲೀಸೂ ಎಲ್ಲ ಒಂದೇ ಅಲ್ಲಾ ಮಾರಾಯ ? ಅವರ ವಿಷ ಆಕನ ಶಿಕ್ಷೆ ಕೊಡಿಕೇ ನೊಡ್ತೆ. ಅದೂ ನಿಂಗೆ ಪಾಸಿ ಆಗ್ತಿತ್ತ್. ನನ್ನ ಒಂದ್ ಉಪಾಯಲಿ ಜೀವಾವಧಿ ಆದ್. ಇನ್ನೀಗ ಗೌರನ ಕೊಲ್ಲುವ ಕೇಸ್ ಅಷ್ಟೊಂದು ಜೋರಾದ್‌ಲೆ. ಜೆಡ್ಜ್ ಅಸ್ಟ ಇಂಟ್ರೆಸ್ಟ್ ತೋರ್ಸ್‌ದ್‌ಲೆ. ಇನ್ನ್ ಆ ಪೊಲೀಸರ

ಕಳ್ದ ಸಂಚಿಕೆಲಿ..........

ನಾಡ್‌ಕೊಲ್ಲಿ ಮಾದಪ್ಪನ ಮಗಳ್ನ ಮೊದ್ವೆ ಮಾಡಿಕಂಬದುತ ಗ್ಯಾನ ಮಾಡಿ ದೇವಯ್ಯ ಆ ಫ್ಯಾಕ್ಟ್ ಮಾದಯ್ಯನ ಬಾಕೆ ಹೇಳಿಕೆ ಜೀವನ್‌ನ ಕಳ್ಸಿದೆ. ನನ್ನ ಮನಸ್ಸ್ ಈಗ ಬದ್ಲಾವುಟು. ಈ ಐತ್ವಾರ ಎಂಗೇಜ್‌ಮೆಂಟ್ 3ನೇ ಐತ್ವಾರ ಮೊದ್ವೆ 10 ಗಂಟೆಗೆ ಮಾದಪ್ಪನ ಮನೆಗೆ ಬುದವೆತೇಳ್ ಮಾದಯ್ಯತ ಹೇಳಿ ಕಳ್ಸಿದೆ. ಮಾದಪ್ಪನ ಮನೆವೆಲ್ಲ ಅರೆಬರೆ ನಂಬಿಕೇಲಿ ಎಲ್ಲಾ ಏರ್ಪಾಡ್ ಮಾಡ್ತೆ ಸಮಯಕ್ಕೆ ಸರಿಯಾಗಿ ದೇವಯ್ಯ ಮತ್ತೆ ಹೆಣ್ಣ್ ಮಕ್ಕ ಎಲ್ಲಾ ಹೋಗಿ ಮಾತಾಡಿ ಬಂದೊ. ಇತ್ತ ದೇವಯ್ಯ ಮಾದಪ್ಪನಲ್ಲಿಂದ ಬಂದಂಗೆ ಗಾಳಿ ಮರ ಸೋಮಯ್ಯನ ಮಜನ ನೋಡಿಕೆ ಸೆಂಟ್ರಲ್ ಜೈಲಿಗೆ ಹೋದೆ.

ಮುಂದೆ ಓದಿ .........

ವಿಚಾರ ನಂಗೆ ಬುಡ್. ನಾನ್ ನೋಡಿ ಕಣೆ.

ದೇವಯ್ಯ ಧೈರ್ಯಕೊಟ್ಟ್‌ತ್.

'ಹ್ಞಂ ಏನೇ ಆ‍ಲಿ ಒಮ್ಮೆ ಜಾಮಿನ್ ಕೊಟ್ಟ್ ನನ್ನ ಬುಡ್‌ಗಡೆ ಮಾಡಿ. ಪಪ್ಪನೊ, ತಂಗೆನೊ ಒಮ್ಮೆ ನೋಡಕಲ್ಲ. ನನ್ನ ತಂಗಿದ್ ಮೊದ್ವೆ ಮಾಡ್ವುದೆ ನಂಗೆ ಅತಿ ಮುಖ್ಯ. ಅದರ ಖರ್ಚಿಗಿರುವ ಹಣ ಕೊಟ್ಟ್‌ನೇಂತ ನೀವ್ ಹೇಳ್ತಾ ಒಳರಿ. ಒಂದ್ ಕೊಲೆ ಮಾಡುದೂ ಎರಡ್ ಕೊಲೆ ಮಾಡುದೂ ಒಂದೇ. ಆದ್ರೆ ಒಂದ್ ವಿಚಾರ, ಅವಳ ಕೊಂದ ತಕ್ಷಣ ನೀವ್ ಹೇಳ್ದ ಹಣ ನನ್ನ ಕೈ ಸೇರೊಕು. ಕಾರ್ಯ ಕಳ್ದ ಮೇಲೆ ಏ...sss ಹೋಗು, ಹೋಗು ತೇಳ್ರೆ ನಾನ್ ಮತ್ತೆ ಮೂರನೇ ಕೊಲೆಗಾರನಾಗುವ ಸಾಧ್ಯತೆ ಉಟ್ಟ್. ಈಗಲೇ ಹೇಳಿ ಬುಟ್ಟನೆ. ನಿಮ್ಮ ಕಾರ್ಯ ಆದ ಮೇಲೆ ಬುದ್ಧಿ ಬದ್‌ಲಾದರ್ನ ನಾನ್ ಕಂಡೊಳೆ. ಅದರ್‌ಂದ ಹೇಳ್ತಾ ಒಳೆ.'

'ನೋಡ್ ಮಾರಾಯ ನಾನ್ ಹೇಳ್‌ದಂಗೆ ನಡೆಂವ.

ಮಾತ್ ಮಾತೆ ಗೊತ್ತಾತಲ್ಲೆ ?

ದೇವಯ್ಯ ಚಂಗುಮಣಿಗೆ ಭಾಷೆ ಕೊಟ್ಟತ್.

ಚಂಗುಮಣಿನ ಜಾಮೀನ್‌ಲಿ ಬುಡ್‌ಗಡೆ ಮಾಡಿಕೆ ದೇವಯ್ಯ ಭಾರೀ ದೊಡ್ಡವರ್ನೆಲ್ಲಾ ಕಂಡತ್. ಮಾತ್ ನಡೆಯುದ ಕಡೆ ನೋಟ್‌ನ ಕಂತೆ ಮಾತಾಡ್ತ್.

ಚಂಗುಮಣಿಗೆ ಜಾಮೀನ್ ಏರ್ಪಾಡ್ ಮಾಡಿ ಬುಟ್ಟ್ ದೇವಯ್ಯ ಮಧ್ಯಾನಾಕನ ಮನೆಗೆ ಬಾತ್.

ಗೌರನ ಕತೆ ಮುಗ್ಸಿಕೆ ಕೊಡೊ 20 ಸಾವ್ರ ರೂಪಾಯಿ ಒಂದ್ ನಷ್ಟನೆ ಅಂತ ಅವಂಗೆ ಅನ್ಸಿತ್. ಹ್ಞಂ ಇಪ್ಪತ್ತ್ ಲಕ್ಷ ಕೊಡೋ ಗೂಡೆನೆ ತರಕಾಯ್ತ್. ಕಳ್ಳ ಸೂ... ಮಜ ಹೋಗಿ ಹೋಗಿ ಆ ಬೋಸುಡಿದ್ ಬಲೆಗೆ ಬಿದ್ದ್‌ಬುಡ್ತಲ್ಲ.

ಇನ್ನೀಗ ಎರಡ್ನೆ ಮೊದ್ವೆಂತ ಒಂದ್ ಮಾತ್ ಬಂದದೆ ಅಷ್ಟೆ ತಾನೆ. ಅದ್ ಪರವಾಗಿಲ್ಲೆ. ದೂರದ ಕಡೆ ಸಂಬಂಧ ನೋಡ್ರೆ ಆತ್. ಯಾವುದಕ್ಕೂ ಈ ಮೊದ್ವೆ ಕಳೀಲಿ, ಗೌರನ ಕತೆ ಮುಗೀಲಿ.

* * * *

ನಾಡ್‌ಕೊಲ್ಲಿ ಮಾದಪ್ಪ ತನ್ನ ಮಗ ತಾರನ ಮನೆಗೆ ಹೊರಟತ್. ದಾರಿಲಿ ಸಿಕ್ಕಿದ ಒಂದ್ ಅಂಗ್ಡಿಂದ ಎರಡ್ ಪಟ್ಣೆ ಬಿಸ್ಕೆಟ್ ಮಕ್ಕಳಿಗೆ ಕೊಡಿಕೆತ ತಕಂಡ್ತ್. ಮಗಳ ಮನೆ ಅಂಗಳಕ್ಕೆ ಎತ್ತ್‌ಕಾಕನ ಮಾದಪ್ಪಂಗೆ ಬಾರೀ ಸುಸ್ತಾಗೊತು. ಅಂಗಳದ ಒಂದ್ ಮೂಲೆಲಿ ಕಾಫಿತುಂಬಿದ ಮೂಟೆಗ ಬೆಟ್ಟದಂಗೆ ಬಿದ್ದಿತ್ತ್. ಮತ್ತೆ ಒಂದ್ ಮೂಲೆಲಿ ಕೆಲ್ಸದವು ಬತ್ತ ಒಣಗಿಸ್ತಾ ಒಳೊ.

ತಾರನ ಮಕ್ಕ ರಾಕೇಶ್ ಮತ್ತೆ ರಜನಿ ಹೊರಗೆ ಪ್ಯಾರ್ಲಕಾಯಿ ಮರದಡಿಲಿ ಚೆಸ್ ಆಡ್ತಾ ಇದ್ದೊ. ಮಾದಪ್ಪ ಮಕ್ಕಳ ಹತ್ರಕ್ಕೆ ಹೊದ್ರೂ ಮಕ್ಕ ಆಟಲೇ ಮಗ್ನ ಆಗೊಳೊ.

"ಮುಮ್ಮ ಎಲ್ಲಿ ಪುಟ್ಟ ?"

ಮಾದಪ್ಪ ಕೇಳ್ತ್. ಎರಡನೆ ಸರ್ತಿ ಕೇಳ್ವಾಕನ "ಒಳಗೆಲ್ಲೋ ಇರೋಕು."

ಉದಾಸೀನಲೇ ಮಕ್ಕ ಉತ್ತರ ಹೇಳಿ ಆಟಲೇ ಮುಳ್ಗಿದೊ. ತನ್ನ ಕೈಲಿದ್ದ ಬಿಸ್ಕೆಟ್‌ನ ಮಾದಪ್ಪ ರಾಕೇಶ್‌ನ ಕೈಗೆ ಕೊಟ್ಟತ್. ಬೇಕಾ ಬೇಡನಂತ ಒಮ್ಮೆ ಬಿಸ್ಕೆಟ್ ಪ್ಯಾಕೆಟ್ ನೋಡ್ತ್.

'ಥೂ ಇದೆಂತ ತೌಡ್ ಬಿಸ್ಕೆಟ್ ನಂಗೆ ಬೇಡತ ಅಂವ ಹೇಳಿ ವಾಪಸ್ ಕೊಟ್ಟತ್.

[ಸಶೇಷ]

---

**ಕೊಡಗು ಸಂಗಾತಿ ಪತ್ರಿಕೆಗೆ ಇಂದೇ ಚಂದದಾರರಾಗಿ**

[4ನೇ ಪುಟದಿಂದ ಮುಂದುವರೆದುದು

ತ್ತಮ ಶಿಕ್ಷಕ ಪ್ರಶಸ್ತಿಗೂ ಪಾತ್ರರಾಗಿದ್ದಾರೆ. ಈ ಹರ್ಷದ ಸಂದರ್ಭದಲ್ಲಿ ಪ್ರಶಸ್ತಿಗಾಗಿ ಆಯ್ಕೆ ಮಾಡಿದ ಕೊಡಗು ಜಿಲ್ಲಾ ಸಾ.ಶಿ. ಇಲಾಖೆಯ ಅಧಿಕಾರಿಗಳನ್ನು, ಬೆಂಗಳೂರಿನ ಶಿಕ್ಷಣ ಇಲಾಖೆಯ ಅಧಿಕಾರಿಗಳನ್ನು ಮನದುಂಬಿ ನೆನೆಯುತ್ತಾರೆ. ಆಡಳಿತ ಮಂಡಲಿ, ವಿದ್ಯಾರ್ಥಿಗಳು, ಪೋಷಕರು ಹಾಗೂ ಮಿತ್ರರು, ಬಂಧುಗಳೊಡನೆ ಹರ್ಷವನ್ನು ಹಂಚಿಕೊಂಡಿದ್ದಾರೆ.

ಕಡ್ಡಿ ಮೀಸೆಯ ಮಂದಣ್ಣನವರು ಸರಳ ಸ್ವಭಾವದ, ಸದಾ ಹಾಸ್ಯ ಪ್ರಜ್ಞೆಯ ವ್ಯಕ್ತಿ. ಇವರು ಕಾರ್ಯ ನಿರ್ವಹಿಸುವ ವಿದ್ಯಾಸಂಸ್ಥೆಯು ಈ ವರ್ಷದ ಅಂದರೆ 1998–99ರ ಸಾಲಿನ ಸುವರ್ಣ ಮಹೋತ್ಸವ ಸಂದರ್ಭದಲ್ಲಿ 'ಕೊಡಗಿನ ಅತ್ಯುತ್ತಮ ಸಂಸ್ಥೆ' ಎಂಬ ಹೆಗ್ಗಳಿಕೆಯ ಪ್ರಶಸ್ತಿಯನ್ನು ಗಳಿಸಿರುವುದು ಬಹು ಹೆಮ್ಮೆಯ ಸಂಗತಿಯಾಗಿದೆ. ಇವರ ಈ ಶ್ರಮದ ಸೇವೆಗೆ ತಕ್ಕುದಾದ ರಾಷ್ಟ್ರ ಪ್ರಶಸ್ತಿಯು ಲಭಿಸಲೆಂದು ಕೊಡಗು ಸಂಗಾತಿ ಜನಾಂಗದ ಪರವಾಗಿ ನಮ್ಮೆಲ್ಲರ ಶುಭ ಹಾರೈಕೆ.

○ ಬಿ. ಆರ್. ಜೋಯಪ್ಪ,
ಮಡೆ.

## ನಿಮಗಿದು ತಿಳಿದಿರಲಿ

○ ಸಮುದ್ರದ ಆಳವನ್ನು ಅಳೆಯುವ ಸಾಧನ—ಪ್ಯಾಡೋಮೀಟರ್.

○ ಮಳೆಯ ಪ್ರಮಾಣವನ್ನು ಅಳೆಯುವ ಸಾಧನ—ರೈನ್‌ಗೇಜ್.

○ ಗಾಳಿಯ ತೇವಾಂಶವನ್ನು ಅಳೆಯುವ ಸಾಧನ—ಹೈಗ್ರೋಮೀಟರ್

○ ವಾತಾವರಣದ ಮಟ್ಟವನ್ನು ಅಳೆಯುವ ಸಾಧನ—ಬಾರೋಮೀಟರ್.

ಸಂಗ್ರಹ: ಮಞಾಂಡ್ರ ಚೈತ್ರ ಈರಪ್ಪ,
ಯವಕಪಾಡಿ.

# ದಾನಿಗಳು



ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲ ತಾಲ್ಲೂಕು ಕಾಡುಕರೆನ ಹಳ್ಳಿ, ಕಾವೇರಿನಾಡು ವಿದ್ಯಾಸಂಘದ ಆವರಣದಲ್ಲಿ ದಿನಾಂಕ 13-9-98 ರಂದು ಕೊಡಗಿನ ನಾಡಹಬ್ಬ 'ಕೈಲ್ ಮುಹೂರ್ತ' ವಿಜೃಂಭಣೆಯಿಂದ ಜರುಗಿತು. ಅರೆಭಾಷೆ ಗೌಡರ ಹಿರಿಮೆ ವೈಶಿಷ್ಟತೆಗಳ ಸಂಕೇತವಾಗಿ ಸಂಪ್ರದಾಯಿಕ ಉಡುಪನ್ನು ಧರಿಸಿದ್ದವರು ಎನ್. **ಶ್ರೀ ಕೋಳಿಬೈಲು ನಾಣಯ್ಯನವರು.**

ಶ್ರೀ ಕಾವೇರಿನಾಡು ವಿದ್ಯಾ ಸಂಸ್ಥೆಯ ಆವರಣದಲ್ಲಿ ನೂತನವಾಗಿ ನಿರ್ಮಿತವಾಗಿರುವ ಅಯ್ಯಪ್ಪ ದೇವಸ್ಥಾನಕ್ಕೆ ಶ್ರೀ ಅಯ್ಯಪ್ಪ ದೇವರ ಪಂಚ ಲೋಹದ ವಿಗ್ರಹವನ್ನು ದಾನಮಾಡಿದ್ದರ ಪ್ರಯುಕ್ತ ಕೊಡಗು ಪ್ರಜಾವೇದಿಕೆಯ ಸಂಚಾಲಕರಾದ ಶ್ರೀಮಾನ್ ಎನ್. ಎಸ್. ದೇವಿಪ್ರಸಾದ್‌ರವರು ಶ್ರೀಯುತರಿಗೆ ಕಾವೇರಿ ನಾಡಿನ ಪರವಾಗಿ ನೆನಪಿನ ಕಾಣಿಕೆ ನೀಡುತ್ತಿರುವುದು.

ಕೊಡುಗೈ ದಾನಿಗಳಾದ ಶ್ರೀ ಕೋಳಿಬೈಲು ನಾಣಯ್ಯ ಮತ್ತು ಪಾರ್ವತಿ ದಂಪತಿಗಳಿಗೆ ಆಯುರಾರೋಗ್ಯ ಐಶ್ವರ್ಯ ಭಾಗ್ಯವನ್ನು ಪರಮಾತ್ಮನು ದಯಪಾಲಿಸಲಿ ಎಂದು ಹಾರೈಸೋಣ.

---



---

— ಸಂಗಾತಿ ಪ್ರಕಟಣೆ —

**ಮೈಸೂರು ನಗರದಲ್ಲಿ ದೂರವಾಣಿ ಸಂಖ್ಯೆಯನ್ನು ಹೊಂದಿರುವ ಸರ್ವ ಅರೆಭಾಷಿಕ ಗೌಡ ಬಾಂಧವರು ತಮ್ಮ ದೂರವಾಣಿ ಸಂಖ್ಯೆಯನ್ನು ಕೊಡಗು ಸಂಗಾತಿ ಕಛೇರಿಗೆ ತಿಳಿಸುವಂತೆ ವಿನಂತಿ.**

**–ಸಂಪಾದಕಿ**

K·R·N·N 240 10-01-96 TCI Kar. 09592

## ಹಾರ್ದಿಕ ಶುಭಾಶಯುಗಳು



ಈ ಬಾರಿಯ "ರಾಜ್ಯ ಪ್ರಶಸ್ತಿ" ವಿಜೇತ ಮಡೆ ಮಹೇಶ್ವರ
ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾಗಿರುವ

**ಶ್ರೀ ತೊತ್ತಿಯನ ಯು. ಮಂದಣ್ಣ**

ರವರು ತಮ್ಮ ಮನಸ್ಸು, ಆತ್ಮ ಹಾಗೂ ವ್ಯಕ್ತಿತ್ವ,
ಎಲ್ಲವನ್ನೂ ಶಿಕ್ಷಕ ವೃತ್ತಿಗೆ ಸೀಮಿತಗೊಳಿಸಿ ಕೇವಲ ಶಿಷ್ಯರ ಒಳಿತಿಗೋಸ್ಕರ
ದುಡಿದ ಪ್ರಾಮಾಣಿಕ ಶಿಕ್ಷಕರು.

ಇವರ ಅಪ್ರತಿಮ ಸೇವೆಗೆ **"ರಾಷ್ಟ್ರ ಪ್ರಶಸ್ತಿಯು"** ಇವರ ಕಿರೀಟವನ್ನೇರಲಿ

- **ಶ್ರೀ ನೆರಿಯನ ಟಿ. ಸೋಮಯ್ಯ** [ನಿವೃತ್ತ ಶಿಕ್ಷಕರು] **ಮತ್ತು ಶ್ರೀಮತಿ ಸರಸ್ವತಿ**
- **ಡಾ. ಎನ್. ಎಸ್. ನವೀನ್** ಮತ್ತು ಡಾ|| **ಬಿ. ಕೆ. ರಾಜೇಶ್ವರಿ** [ನವ ದಂಪತಿಗಳು]
- ಡಾ|| ಎನ್. ಎಸ್. ಪ್ರವೀಣ್ [ಪ್ರಸೂತಿ ಮತ್ತು ಸ್ತ್ರೀ ರೋಗ ತಜ್ಞರು, ಜ್ಯೋತಿ ಆಸ್ಪತ್ರೆ, ಮಾನಂದವಾಡಿ]
- **ಶ್ರೀ ರಾಧಾಕೃಷ್ಣ** ಮಡಪ್ಪಾಡಿ [ಸಿ. ಡಿ. ಪಿ. ಬಿ., ಕೆ. ಆರ್. ನಗರ] **ಮತ್ತು ಶ್ರೀಮತಿ ಪ್ರಸಾದಿನಿ** ಹಾಗೂ **ಮಕ್ಕಳು [ಸಜ್ಜನ್, ಮಧುರ]**
- **ಕುಮಾರಿ ಯಂ. ಸಿ. ರೇಶ್ಮಾ ಮತ್ತು ಮನೆಯವರು**

---



**"ಭಾರತ್ ಶ್ರೀ"**



**"ಭಾರತ್ ಗೌರವ್"**

ಅರೆಭಾಷಿಕರ ಹೆಮ್ಮೆಯ ಸುಪುತ್ರರಾಗಿ, ಜನಾಂಗದ ಕೀರ್ತಿಪತಾಕೆಯನ್ನು
ಅಷ್ಟದಿಕ್ಕಿಗೂ ಹಬ್ಬಿಸಿದ ಕೀರ್ತಿಶಾಲಿ, **"ಭಾರತ್ ಶ್ರೀ** ಮತ್ತು **"ಭಾರತ್ ಗೌರವ್"**
ಪ್ರಶಸ್ತಿಗೆ ಪಾತ್ರರಾದ **ಶ್ರೀ ಕೊರಿಯಾರು ಅಪ್ಪಣ್ಣ ರವಿಕುಮಾರ್** ರವರಿಗೆ
ಲಭಿಸಿದ ಪ್ರಶಸ್ತಿಯ ಒಂದು ನೋಟ.

**Printed by M K Thammaiah and Published byKodagu Sangathi on behalf of Pattada P. Sheelamani and Printed at ASHIRWAD PRINTERS 180/A, 6th Main, Vinayakanagar, Mysore-12 Published at Mysore, Editor PATTADA. P SHEELAMANI, No 35 1st Cross, 4th Block Near Divisional Telephone Office) Jayalakshmipuram, Mysore-570 012 Phone : 516771**